ನನಗೆ ಮಗ ಆದರೆ, ನೀನು ಸೊಸೆ. ಆದ್ದರಿಂದಲೇ ಸಲಿಗೆ ವಹಿಸಿ ಒಂದು ಮಾತು ಹೇಳಬೇಕೆಂದು ಬಂದೆ.'

ಅವಳ ಎದೆಯಲ್ಲಿ ಕವಿದ ದಿಗಿಲು ಹೆಚ್ಚಾಯಿತು. ಮಾತನಾಡದೆ ಹೆದರಿದ ಹಕ್ಕಿಯಂತೆ, ಅಗಲವಾದ ಕಣ್ಣು ತೆರೆದು ಅವರನ್ನು ನೋಡಿದಳು.

'ವೆಂಕಟಸುಬ್ಬುವಿನಮೇಲೆ ನಿನಗೆ ತುಂಬಾ ಪ್ರೇಮವಿದೆಯಲ್ಲವೇ? ಇದೆ. ಆ ಪ್ರಶ್ನೆಯನ್ನು ಕೇಳಬೇಕಾದುದೇ ಇಲ್ಲ. ಪ್ರೇಮವಿದೆ ಎನ್ನುವುದಕ್ಕೆ, ಅವನ ಹೆಸರು ಕೇಳಿದ ಕೂಡಲೇ ಹೊಳೆವ ನಿನ್ನ ಕಣ್ಣುಗಳೇ ಸಾಕ್ಷಿ. ಆದರೆ ಪ್ರೇಮಕ್ಕೂ ಕಾಮಕ್ಕೂ ಇರುವ ನಡುವಿನ ಅಂತರ ಬಹುನವಿರು ತಾಯಿ. ಅದನ್ನು ಯೋಚನೆ ಮಾಡಿದೀಯಾ?'

'ಊಹೂ'

'ನಾನು ಬಲ್ಲೆ. ಯಾರೂ ಅದನ್ನು ಯೋಚಿಸುವುದಿಲ್ಲ. ಹೊಳೆಯಲ್ಲಿ ಮುಳುಗಿದವರು ಆ ನೀರು ಉಪ್ಪೇ, ಸಿಹಿಯೇ ಎಂದು ಯೋಚಿಸುವುದಿಲ್ಲ. ಹಾಗೇ ಪ್ರಣಯದ ಹೊಳೆಯಲ್ಲಿ ಮುಳುಗಿದವರೂ ಕೂಡಾ ಆದರೂ ತಿಳಿದುಕೊಳ್ಳಬೇಕೆಂದರೆ ಒಂದು ದಾರಿಯಿದೆ.'

'ಏನು?'

'ಪ್ರೇಮ ತನ್ನ ಕೃಪೆಗೆ ಪಾತ್ರವಾದ ವ್ಯಕ್ತಿಯನ್ನು ಉದ್ಧಾರ ಮಾಡುತ್ತದೆ; ಕಾಮ ಪಾತಾಳಕ್ಕೆ ತಳ್ಳುತ್ತದೆ. ಒಂದರಲ್ಲಿ ಅರಿವು ಅರಳಿದರೆ, ಇನ್ನೊಂದರಲ್ಲಿ ವಿಸ್ಮೃತಿ ಕವಿಯುತ್ತದೆ. ಮೊಗ್ಗನ್ನು ಅರಳಿಸಿ ಜಗತ್ತಿಗೇ ಅದರ ಸೌಂದರ್ಯ, ನರುಗಂಪನ್ನು ನೀಡುವುದು ಪ್ರೇಮ; ಅರಳಿದ ಹೂವನ್ನು ಬಾಡಿಸಿ ಕೊಲ್ಲುವ ಬಿಸಿಲು ಕಾಮ. ನಿಮ್ಮ ಪ್ರಣಯ ಎಂಥದೋ ಯೋಚಿಸಿ ನೋಡು ತಾಯಿ'

'ನಾನು ಅರಿಯದ ಹೆಣ್ಣು, ತಾವೇ ಹೇಳಬೇಕು.'

'ಹೇಳಲೇ. ಕಟುವಾದರೆ ಕ್ಷಮಿಸುತ್ತೀಯಾ?'

'ಹೇಳಿ' ಎದೆನಡುಗುತ್ತಿದ್ದರೂ ಕೇಳಿದಳು ಚಂದ್ರಾ,

'ನಿನ್ನದು ಪ್ರೇಮವಿರಬಹುದು ತಾಯಿ ಆದರೆ ವೆಂಕಟಸುಬ್ಬುವಿನದು ಕಾಮ. ಅದು ಅವನನ್ನು ಪಾತಾಳಕ್ಕೆ ತುಳಿಯುತ್ತಿದೆ. ಕರ್ತವ್ಯ ಭ್ರಷ್ಟನಾಗಿದಾನೆ ಅವನು; ಅವನನ್ನೇ ಅವನು ಮರೆತಿದಾನೆ. ಸಂಗೀತ ತನ್ನ ಬಾಳ ಉಸಿರು ಎಂದುಕೊಂಡವನು ಅವನು. ಅವನಿಗೆ ಯಾರೂ ಅಡ್ಡವಾಗಲಿಲ್ಲ. ಇವನು ಅವನ ತಂದೆಗೆ ಇದ್ದ ಒಬ್ಬನೆ ಮಗ. ತಮ್ಮದಾರಿಗೆ ಬರದಿದ್ದುದನ್ನು ಕಂಡು ಕೊರಗಿ, ಆದರೂ ಅವನಿಗೆ ಅಡ್ಡಿಯಾಗದೆ ಮುಂದೆ ಬರಲಿ ಎಂದು ಕಣ್ಣು ಮುಚ್ಚಿದರು. ನಾವು-ಅವನ ಆಪ್ತರು ಇಷ್ಟರು, ಎಲ್ಲರೂ ಅವನ ದಾರಿಯಲ್ಲಿ ಅವನು ಮುಂದೆ ಬರಲಿ ಎಂದು ಹಾರೈಸಿದೆವು. ಬೇರೇನೂ ಬಯಸಲಿಲ್ಲ. ಅವನಿಗಿದ್ದುದೂ ಅದೊಂದೇ ಬಯಕೆ. ಈಗ-ಎಲ್ಲರ ಬಯಕೆಯೂ ಮೋಹದ ಚಿತೆಯ ಮೇಲೆ ಮಲಗಿದೆ. ನಿನ್ನ ಸಂಗದಲ್ಲವನು ಎಲ್ಲವನ್ನೂ ಮರೆತಿದಾನೆ. ಈಗ ಅವನು ಸಂಗೀತಾಭ್ಯಾಸ ಮಾಡುತ್ತಿದಾನೆಯೇ ಎಂದು ವಿಚಾರಿಸಿದೆಯಾ ನೀನು?.... ಅಷ್ಟೇ ಅಲ್ಲ, ಇನ್ನೂ ದೂರ ಹೋಗಿದೆ ಅವನ ಇಳಿತ. ನೀನರಿಯೆ, ನಿನಗೂ ಅವನು ಹೇಳಿಲ್ಲ, ನಿನಗಾಗಿ ಅವನು ಮಾಡಬಾರದುದನ್ನು ಮಾಡಿದಾನೆ...' ಅನಂತಯ್ಯನವರ ಮಾತು ಗಳಿಗೆ ಗಳಿಗೆಗೆ ಬಿರುಸಾಗುತ್ತಿತ್ತು.

'ಏನು? ಏನುಮಾಡಿದರು ಅವರು?' ಭೀತಿ ಕಾತುರಳಾಗಿ, ಬಿಗಿದ ಧ್ವನಿಯಲ್ಲಿ ಕೇಳಿದಳು. ಬರಿಮನೆಯಲ್ಲಿ ಕವಿದ ಕತ್ತಲೆಯಂತೆ, ಅವಳ ಎದೆಯಲ್ಲಿ ಭೀತಿ ಬಲಿಯುತ್ತಿತ್ತು. ಉಸಿರು ಹತ್ತಿ ಬಂದಂತಾಯಿತು...

'ನಿನ್ನ ಬಳಿಗೆ ಬರುವಾಗ ಸಾವಿರ ಹೊನ್ನು ತರಲಿಲ್ಲವೇ?'

'ತರಬೇಕೆಂದು ನಾನು ಹೇಳಲಿಲ್ಲ.'

'ಇರಬಹುದು. ಆದರೆ ಆ ಹಣ ಎಲ್ಲಿಂದ ಬಂದಿತು ಗೊತ್ತೆ?— ಹಣಕ್ಕಾಗಿ ಪಟ್ಟಣಶೆಟ್ಟಿ ವಿರೂಪಾಕ್ಷಪ್ಪನವರ ಬಳಿ ರಾಗಗಳನ್ನು ಒತ್ತೆಯಿಟ್ಟು ತಂದಿದಾನೆ. ಆ ಹಣ ತೀರುವಂತಿಲ್ಲ, ಅವನಿನ್ನು ಆ ರಾಗಗಳನ್ನು ಹಾಡುವಂತಿಲ್ಲ. ಸಂಗೀತವೇ ಬೇಡವಾದವನಿಗೆ ರಾಗದ ಚಿಂತೆಯೇಕೆಂದು ಎಲ್ಲಕ್ಕೂ ಎಳ್ಳು ನೀರು ಬಿಟ್ಟಿದಾನೆ. ಈಗ ಹೇಳು ಈ ಪ್ರೇಮದಿಂದ ಅವನ ಉದ್ಧಾರವಾಗಿದೆಯೋ, ಅಧಃಪತನವಾಗಿದೆಯೋ?'

'ಅನಂತಯ್ಯನವರು ಹೇಳಿದುದನ್ನು ಕೇಳಿ ಆಕೆಗೆ ಉಸಿರು ತಿರುಗಿಸಲು ಅವಕಾಶ ಕೊಡದೆ ಕೆನ್ನೆಗೆ ಹೊಡೆದಂತಾಯಿತು.

'ನಿಜವೇ ನೀವು ಹೇಳುವ ಮಾತು? ರಾಗಗಳನ್ನು ಒತ್ತೆಯಿಟ್ಟರೇ ಅವರು?'

'ಈ ಜೀವಕ್ಕೆ ಸುಳ್ಳಾಡಿ ಅಭ್ಯಾಸವಿಲ್ಲ.'

'ಅಯ್ಯೋ-ಇದೇನು ಮಾಡಿದರು....ನನಗಾದರೂ ಒಂದು ಮಾತು ಹೇಳಲಿಲ್ಲ.' ಎಂದು ಚಂದ್ರಾ ತಲೆತಗ್ಗಿಸಿ, ಕಂಬನಿಗರೆಯುತ್ತಾ ಕುಳಿತಳು.

'ಊರಲ್ಲಿರುವ ಜನ ಏನಾಡುತ್ತಾರೆಂದು ಗೊತ್ತೆ-ಚಂದ್ರಾಸಾನಿ ವೆಂಕಟಸುಬ್ಬಯ್ಯನನ್ನು ಹಾಳು ಮಾಡುತ್ತಿದಾಳೆ. ಅವಳಿಗೆ ಹಣ ಒದಗಿಸಲು ಇವನು ರಾಗಗಳನ್ನು ಒತ್ತೆ ಇಡಲೂ ಹೇಸಲಿಲ್ಲ.......'

'ನೀವೂ ನಂಬಿದಿರಾ ಆ ಮಾತನ್ನು....ನಿಮ್ಮಾಣೆ...ನನ್ನಾಣೆ.... ಅವರ ಹಣ ಬೇಡ. ಪ್ರೀತಿಯೊಂದು ಸಾಕು. ಅದಕ್ಕಾಗಿ ಬೇಕಾದುದನ್ನು ಮಾಡಲು ಸಿದ್ಧನಾಗಿದೇನೆ...ಹೋಗಿ ಆ ರಾಗಗಳನ್ನು ಬಿಡಿಸಿ...' ಎಂದು ಚಂದ್ರಾಸಾನಿ ತನ್ನ ಕತ್ತಿನಲ್ಲಿದ್ದ ಹಾರ, ಕೈಯಲ್ಲಿದ್ದ ವಜ್ರದ ಕಂಕಣವನ್ನು ತೆಗೆದು ಅನಂತಯ್ಯನವರ ಕಾಲ ಬಳಿ ಸರಿಸಿದಳು... 'ತೆಗೆದುಕೊಂಡು ಹೋಗಿ....ನಾನು ಕೊಟ್ಟೆನೆಂದು ಅವರಿಗೆ ಹೇಳಬೇಡಿ. ಸಿಟ್ಟಾದಾರು'

'ನಾನೂ ನಿನ್ನಿಂದ ಬೇಡಲೇ ಬಂದಿದ್ದೆ ತಾಯಿ. ಆದರೆ ಹಣವನ್ನಲ್ಲ...'

'ಏನು ಬೇಕು ಹೇಳಿ, ಕೊಡಲು ಸಿದ್ಧನಾಗಿದೇನೆ.'

'ಖಂಡಿತವೇ ಆ ಮಾತು?'

'ಸೂರ್ಯ ಚಂದ್ರರೇ ಸಾಕ್ಷಿ'

'ಮಾತುಕೊಟ್ಟು ಹಿಂಜರಿಯಕೂಡದು.'

'ಇಲ್ಲ. ಎಂದೆಂದಿಗೂ ಇಲ್ಲ.'

'ಸರಿ. ಇಗೋ ತಾಯಿ-ನಾನು ಬ್ರಾಹ್ಮಣ. ಆದರೂ ಎಂದೂ ಕೈಚಾಚಿ ಯಾರಲ್ಲೂ ಬೇಡಿದವನಲ್ಲ. ಇಂದು ಬೇಡುತ್ತಿದ್ದೇನೆ—ಭಿಕ್ಷೆ ಎಂದು ಅವನನ್ನು ನನ್ನ ಉಡಿಯಲ್ಲಿ ಹಾಕು.'

'ಸಿಡಿಲನ್ನು ಸೆಳೆದು ಬಿಟ್ಟಂತಾಯಿತು, ಆಕೆಗೆ ಆ ಮಾತು ಕೇಳಿ.

'ಅಯ್ಯೋ, ಇದೇನು ಭಿಕ್ಷೆ ಬೇಡಿದಿರಿ?.......'

'ನನಗಾಗಿ ಅವನ್ನು ನಾನು ಬೇಡುತ್ತಿಲ್ಲ ತಾಯಿ, ಅವನಿಗಾಗಿ ನಿನ್ನಿಂದ ಅವನನ್ನು ಬೇಡುತ್ತಿದೇನೆ. ನಿನ್ನ ವ್ಯಥೆಯನ್ನು ನಾನು ಬಲ್ಲೆ ತಾಯಿ, ನಿನ್ನನ್ನು ಅಗಲಿದ ಅವನಿಗೂ ಎಷ್ಟು ವ್ಯಥೆಯಾಗುವುದೆಂದು ಬಲ್ಲೆ. ಆದರೆ ತ್ಯಾಗದ ಮೂಸೆಯಲ್ಲಿ, ಯಾತನೆಯ ಕಿಚ್ಚಿನಲ್ಲಿ ಬೇಯದೆ ಕಾಮ, ಪ್ರೇಮವಾಗದು. ಭಿಕ್ಷೆ ನೀಡು ತಾಯಿ.'

'ಆಗಲಿ. ಅವರನ್ನು....ಕಳಿಸುತ್ತೇನೆ...' ಎದೆಯ ಕರುಳನ್ನೇ ಕಿತ್ತು ಹೊರಚೆಲ್ಲಿದಂತೆ ನುಡಿದು, ಕೆಳಗುರುಳಿದಳು ಚಂದ್ರಾ. ಉಗ್ರವ್ಯಥೆಯ ದಾವಾನಲದಲ್ಲಿ ಸಿಲುಕಿ ಬೆಂಕಿಯಲ್ಲಿ ಸಿಕ್ಕ ಹಕ್ಕಿಯಂತೆ ಹೊಯ್ದಾಡುತ್ತಿದ್ದಳಾಕೆ. ಅನಂತಯ್ಯನವರಿಗೂ

ಅದನ್ನು ನೋಡುವುದಾಗಲಿಲ್ಲ. ಕಂಬನಿ ತುಂಬಿ ಕಣ್ಣು ಮಂಜಾಯಿತು. ಆಕೆಯ ಬಳಿಯಲ್ಲಿ ಕುಳಿತು ತಲೆಯನ್ನು ಮೃದುವಾಗಿ ನೇವರಿಸಿ—

'ತಾಯಿ, ನೀನು ಈ ಲೋಕದ ಮನುಷ್ಯಳಲ್ಲ, ದೇವತಾ ಸ್ತ್ರೀ' ಎಂದು ಹೇಳಿ, ಉಕ್ಕಿ ಬರುವ ಅಳುವನ್ನು ಬಿಗಿಹಿಡಿಯುತ್ತಾ 'ನನ್ನನು ಕ್ಷಮಿಸು ತಾಯಿ....ಸಾನು ಚಂಡಾಲ....' ಎಂದು ನುಡಿದು, ಅಲ್ಲಿ ನಿಲ್ಲಲಾಗದೆ ಹೋಗಿಬಿಟ್ಟರು.

'ಎಷ್ಟು ಹೊತ್ತು ಹಾಗುರುಳಿದ್ದಳೋ ಏರೋ ಚಂದ್ರಾ....ಎದ್ದಾಗ ಅವಳ ಎದೆ ಮಸಣವಾಗಿತ್ತು. ಕಠೋರ ಕರ್ತವ್ಯಪಾಲನೆಯ ಧೃಢ ನಿರ್ಧಾರ ಅವಳ ಮುಖದಲ್ಲಿ ಚಿತಾಗ್ನಿಯಂತೆ ಉರಿಯುತ್ತಿತ್ತು. ಮಂಕಾದ ಕಣ್ಣಿನಿಂದ, ಬರಿ ಮುಗಿಲನ್ನು ದಿಟ್ಟಿಸುತ್ತಾ ಕುಳಿತಿದ್ದು, ಸ್ವಲ್ಪ ಸಮಯಾನಂತರ ದಾಸಿಯನ್ನು ಕೂಗಿ ಹೇಳಿದಳು—'ಹಿಂದೆಂದೂ ಇರದಷ್ಟು ಸೊಗಸಾಗಿ ಇಂದು ಶಯ್ಯಾಗೃಹವನ್ನು ಸಿಂಗರಿಸು.'

'ಹೊತ್ತಾಗಿದೆ. ನೀವು ಶೃಂಗಾರ ಮಾಡಿಕೊಳ್ಳುವುದಿಲ್ಲವೇ ತಾಯಿ.'

'ನನಗೆ ಶೃಂಗಾರ...ಹೂ.... ನಾಳೆ ಮಾಡುವೆಯಂತೆ....'

'ಏಕೆ ತಾಯಿ ಅತ್ತ ಹಾಗಿದೆ?...' ಕಂಬನಿಯ ಕರೆಗಟ್ಟಿದ ಮುಖವನ್ನು ನೋಡಿ, ಆಕೆಯ ಮಾತಿನ ವಿಚಿತ್ರಧ್ವನಿ ಕೇಳಿ ಚಕಿತಳಾಗಿ ಕೇಳಿದಳು ದಾಸಿ.

'ಆ ಮಾತಿಗೆ ಉತ್ತರ ಕೊಡದೆ ಚಂದ್ರಾದಾಸಿಯ ಬೆನ್ನನ್ನು ನೇವರಿಸಿದಳು.

XXXXX

'ಆ ದಿನ ಶಯ್ಯಾಗೃಹವನ್ನು ಹೊಕ್ಕಾಗ ವೆಂಕಟಸುಬ್ಬಯ್ಯ ಅದರ ಶೃಂಗಾರ ವೈಭವವನ್ನು ಕಂಡು ಬೆರಗಾದರು. ಹಿಂದೆಂದೂ ಹಾಗೆ ಸಿಂಗರಿಸಿರಲಿಲ್ಲ ಅದನ್ನು. ಕಾಲಿಟ್ಟರೆ, ಎಲ್ಲಿ ಆ ಸೌಂದರ್ಯ ಮುಕ್ಕಾಗುವುದೋ ಎನಿಸಿತು. ಮೃದುವಾಗಿ ಹೆಜ್ಜೆ ಇಡುತ್ತಾ ನಡೆದು ಮಂಚದ ಬಳಿ ಸಾರಿದರು. ಮಂಚದ ಮೇಲೆ, ಹಾಸಿಗೆಯ ಬದಲು

ಜಾಜಿಯ ಹೂವನ್ನೇ ಹಾಸಿದಂತಿದೆ. ಅದನ್ನು ನೋಡಿ ಅವರಿಗೆ ಮೊದಲ ರಾತ್ರಿಯ ನೆನಪಾಯಿತು. ಅಂದೇ ಹೂವು ಹಾಸಿಗೆಯಾಗಬಾರದು ಎಂದಿದ್ದರು. ಅಂದಿನಿಂದ ಅದು ತಪ್ಪಿತ್ತು. ಇಂದೇಕೆ ಮತ್ತಿದು? ಬೇಡವೆಂದುದನ್ನು ಮಾಡುವ ಹಟವೇ?

’ಚಂದ್ರಾ....ಚಂದ್ರಾ....’ ಅಸಹನೆ ತುಳುಕುವ ಧ್ವನಿಯಲ್ಲಿ ಕೂಗಿದರು ವೆಂಕಟಸುಬ್ಬಯ್ಯ, ಕರೆವ ಮೊದಲೇ ತೋಳೊಳಗಿರುವ ಹೆಣ್ಣು ಇಂದು ಕರೆದರೂ ಬರದೆ ತಡಮಾಡುವುದೇಕೆ? ನಿಜ, ಸಂಜೆಯಿಂದಲೂ ಹಾಗೇ. ದಿನದ ಉಲ್ಲಾಸವಿಲ್ಲ ಏನೋ ಮ್ಲಾನತೆ ಕವಿದಿದೆ. ಕಣ್ಣೊಳಗೆ ಬಂಧಿಸಿದ ಕಂಬನಿ ಹೊಳೆಯುವಂತೆ ಕಾಣುತ್ತದೆ. ಮಾತು ಏಕೋ ಬಿಗಿದು ಬರುತ್ತಿತ್ತು. ಏಕೆ? ತನ್ನ ಮೇಲೆ ಸಿಟ್ಟೇ? ಏನು ಕಾರಣ? ಅದಕ್ಕಾಗಿ ಮಾಡಬೇಡವೆಂದುದನ್ನು ಮಾಡಬೇಕೇ? ಮತ್ತೊಮ್ಮೆ ಕೂಗಿದರು, ಆಕೆಯನ್ನು. ಮಳೆತುಂಬಿದ ಮೋಡ ನಿಧಾನವಾಗಿ ಚಲಿಸಿ ಬರುವಂತೆ ಬಂದಳು ಚಂದ್ರಾ, ಬಂದರೂ ಹತ್ತಿರ ಬರದೆ ಅಷ್ಟು ದೂರ ನಿಂತಿದಾಳೆ.

’ಇದೇನು ವಿಚಿತ್ರ ಈ ದಿನ ಚಂದ್ರಾ?’

’ಏನೂ ವಿಚಿತ್ರವಿಲ್ಲ.’ ಬೇಡವೆಂದು ಆಡುವಂತಿದೆ ಆ ಮಾತು.

’ಇದೇನು ಮತ್ತೆ ಹಾಸಿಗೆಯ ಮೇಲೆ ಹೂವು. ಅಂದೇ ಬೇಡವೆನ್ನಲಿಲ್ಲವೇ?’

’ಹೂವು ಹಾಸಿದರೇನಾಯಿತು?’

’ಹೂವು ಮೈಕಾವಿಗೆ ಬಾಡಬಾರದೆಂದು ಹೇಳಲಿಲ್ಲವೇ? ತಿಳಿಯದಂತೆ ಕೇಳುತ್ತೀಯಲ್ಲಾ?’

’ಹೂವು ಬಾಡಲಿ, ಹಾಳಾಗಲಿ, ಬೆಂಕಿಗೆ ಬಿದ್ದು ಉರಿದು ಬೂದಿಯಾಗಿ ಹೋಗಲಿ. ಏನಾದರೆ ನಿಮಗೇನು? ತಮ್ಮ ಬೆಲೆಯೇ ತಮಗೆ ತಿಳಿಯದವರಿಗೆ ಹೂವಿನ

ಬೆಲೆಯೇನು ಗೊತ್ತು?' ಮಾತು ಏಟಿನಂತೆ ತಗುಲಿತು ಅವರಿಗೆ. ಚುರುಕು ತಗುಲಿದ ಜಾತಿ ಕುದುರೆಯಂತೆ ಸೆಟೆದು ಕೇಳಿದರು:

'ನಿನ್ನ ಮಾತೇ ನನಗೆ ಅರ್ಥವಾಗುತ್ತಿಲ್ಲ ಚಂದ್ರಾ....'

'ಹೇಗಾಗುವುದು ಹೇಳಿ. ಹೂವಿಗಾಗಿ ಅಳುತ್ತಿರಾ? ನಿಮಗಾಗಿ ಅಳುವುದಿಲ್ಲವೇ?....'

'ವೆಂಕಟಸುಬ್ಬಯ್ಯ ಮಿಂಚಿನಂತೆ ಉರಿವ ಆಕೆಯ ಕಣ್ಣುಗಳನ್ನೇ ನೋಡುತ್ತಿದ್ದರು.

'ನಿಮ್ಮ ಬಾಳಿಗೆ ಬೆಂಕಿ ಹೊತ್ತಿಸಿಕೊಂಡು ಹೂವಿಗಾಗಿ ಕಂಬನಿಗರೆಯುತ್ತೀರಾ? ನಿಮ್ಮ ಬಾಳು, ಆಸೆ, ಕನಸು ಎಲ್ಲಕ್ಕೂ ಸೂಡುಬಟ್ಟಿ ಹೇಗೂ ಬಾಡುವ ಹೂವಿಗೆ ಮರುಗುತ್ತೀರಾ?....ಎಲ್ಲಾ ನಟನೆ....ಸುಳ್ಳು... ನಿಮ್ಮ ಪ್ರೀತಿಯೂ ಸುಳ್ಳು. ಸೂಳೆಯ ಪ್ರೇಮಕ್ಕೆ ಸುಳ್ಳಿನ ಬೆಲೆ ಕೊಟ್ಟವರು ನೀವು...'

'ಚಂದ್ರಾ...ನಿನಗೆಲ್ಲೋ ಹುಚ್ಚು ಹಿಡಿದಿದೆ...ಏನು ಮಾತಾಡುತ್ತಿದೀಯ....ನಿನಗೆ ಯಾರೋ ಏನೋ ಹೇಳಿದಾರೆ. ನನ್ನ ಪ್ರೀತಿ ಸುಳ್ಳಲ್ಲ ಚಂದ್ರಾ...ಆ ಮಾತಾಡಿ ನನ್ನ ಕರುಳಿಗೆ ಉರಿ ಹತ್ತಿಸಬೇಡ.' ವಿಹ್ವಲವಾಗಿ ಕೂಗಿದರು ವೆಂಕಟಸುಬ್ಬಯ್ಯ.

'ಸುಳ್ಳಲ್ಲ, ಮೋಸ? ಸಂಗೀತದ ಮೇಲೂ ನಿಮಗೆ ಪ್ರೀತಿ ಇತ್ತಲ್ಲವೆ? ಆದರೂ ನನಗಾಗಿ ರಾಗಗಳನ್ನು ಒತ್ತೆಯಿಟ್ಟಿರಿ. ತಾಯಿಯನ್ನು ಒತ್ತೆ ಇಟ್ಟಿರಿ. ಒತ್ತೆ ಇಟ್ಟು ಮರೆತು ಬಿಟ್ಟಿರಿ. ನಿಮ್ಮ ಪ್ರೇಮಕ್ಕೆ ಅಷ್ಟೇ ಬೆಲೆ. ರಾಗವನ್ನು ಒತ್ತೆ ಇಡುವಾಗ ದುಃಖವಾಗಲಿಲ್ಲವೇ ನಿಮಗೆ? ನಿಮ್ಮ ಕಲೆಗೆ ಮೋಹದ ಉರಿ ಹೊತ್ತಿದಾಗ ಕಂಬನಿಯೇಕೆ ಕರೆಯಲಿಲ್ಲ... ಹೂವಿಗಾಗಿ ಕಂಬನಿಗರೆಯುತ್ತೀರಾ? ಸಂಗೀತಕ್ಕೆ ಗೋರಿ ಕಟ್ಟಿದಮೇಲೆ, ನಿಮ್ಮಲ್ಲಿ ಎಲ್ಲರೂ ಇಟ್ಟ ಕನಸಿಗೆ ಬೆಂಕಿ ಇಟ್ಟ ಮೇಲೆ, ಇದಕ್ಕೇಕೆ ಅಳುತ್ತೀರ? ತುಳಿದು ಬಿಡಿ,

ನಿರ್ದಯವಾಗಿ ತುಳಿದು ಬಿಡಿ, ಈ ಹೂವನ್ನು...ನನ್ನನ್ನೂ ತುಳಿದು ಬಿಡಿ...' ಎಂದು ಚಂದ್ರಾ ಅವರ ಕಾಲ ಮೇಲೆ ಉರುಳಿದಳು.

'ಕಾರ್ಗಾಲದ ಸೊಕ್ಕಿನಲ್ಲಿ ಮಲೆತು ಭೋರ್ಗರೆವ ಜಲಪಾತದಂತೆ ಮಾತು ಸುರಿಯಿತು. ಗರಬಡಿದವರಂತೆ ನಿಂತು ಕೇಳಿದರು ವೆಂಕಟಸುಬ್ಬಯ್ಯ. ಏನೋ ಮಿಂಚು ಹೊಳೆದಂತಾಯಿತು....ತಲೆ ಸುತ್ತಿಬಂತು ಒಂದು ಗಳಿಗೆ ತಲೆ ಸಿಡಿದು ಹೋಗುವುದೇನೋ ಎನಿಸಿತು. ಹಾಸಿಗೆಯಲ್ಲಿ ಹಾಸಿದ ಹೂವು ಅವರನ್ನು ನೋಡಿ ಅಪಹಾಸ್ಯ ಮಾಡಿ ನಕ್ಕಂತಾಯಿತು. ನೆಲದ ಮೇಲೆ ಭಗ್ನ ದೇವತಾವಿಗ್ರಹದಂತೆ ಉರುಳಿದ ಚಂದ್ರಳನ್ನು ನೋಡಿದರು. ಕಣ್ಣಿನಲ್ಲಿ ಕಂಬನಿ ಕೋಡಿಯಾಗಿ ಹರಿಯಿತು.

'ನೀನಾಡಿದುದು. ನಿಜ ಚಂದ್ರಾ—ನಾನು ದ್ರೋಹಿ....ತಾಯಿಗೆ ದ್ರೋಹ ಮಾಡಿದೆ...ನಾನಾವುದಕ್ಕೂ ಅರ್ಹನಲ್ಲ; ನಿನ್ನ ಪ್ರೀತಿಗೂ ಅರ್ಹನಲ್ಲ... ಚಂದ್ರಾ ನೀನು ಬೆಳಕಾದೆ... ಬರುತ್ತೇನೆ ಚಂದ್ರಾ...ದ್ರೋಹ ಮಾಡಿದ ಮುಖ ನಿನಗೆ ತೋರುವುದಿಲ್ಲ'

'ಮುಖ ಮುಚ್ಚಿ ಬಾಗಿಲ ಕಡೆ ಹೊರಟರು ವೆಂಕಟಸುಬ್ಬಯ್ಯ. ಚಂದ್ರಾ ಅವರ ಕಾಲನ್ನು ಬಿಗಿಯಾಗಿ ಹಿಡಿದಿದ್ದಳು. ಹಾಗೇ ಅವರ ಕಾಲನ್ನು ಕಂಬನಿಯಿಂದ ತೊಳೆಯುತ್ತಾ—

'ನನ್ನ ದೊರೆಯೇ, ನನ್ನನ್ನು ಕ್ಷಮಿಸಿ, ನಿಮ್ಮ ಮನ ನೋಯಿಸಿದೆ ನಾನು.'

'ನಿನ್ನನ್ನು ಕ್ಷಮಿಸಬೇಕೇ? ಕುರುಡನಿಗೆ ಕಣ್ಣು ಕೊಟ್ಟ ನಿನ್ನನ್ನು ಕ್ಷಮಿಸಬೇಕೇ? ಚಂದ್ರಾ ನೀನು ನನ್ನ ಗುರುವಾದೆ. ದಾರಿ ತೋರಿಸಿದೆ ಚಂದ್ರಾ... ಈ ಪಾಪಿಯನ್ನು ಉದ್ಧಾರ ಮಾಡಿದೆ. ನನ್ನ ಕಾಲು ಬಿಡು ಚಂದ್ರಾ...ಇಲ್ಲಿ ನಿಂತು ಈ ಪ್ರೇಮದ ಪವಿತ್ರ ಮಂದಿರವನ್ನು ನನ್ನ ಉಸುರಿನಿಂದ ಕಲುಷಿತಗೊಳಿಸಲಾರೆ...'

'ಹೋಗು ನನ್ನ ದೊರೆ...ಜಗತ್ತನ್ನು ಗೆದ್ದು ಬಾಳಬೇಕಾದವರು ಹೆಣ್ಣಿನ ಆಳಾಗಬಾರದು. ದಾಸಿಯ ಒಂದು ಮಾತು ನಡೆಸಿ ಕೊಡುತ್ತೀರಾ?'

'ಏನು? ಏನು ಬೇಕು ಕೇಳು ಚಂದ್ರಾ...'

'ನನ್ನ ದೊರೆಗಿಂದು ಎಷ್ಟು ದುಃಖವಾಗುತ್ತಿದೆಯೆಂದು ಬಲ್ಲೆ... ಈ ದುಃಖದಲ್ಲಿ ಜೀವಕ್ಕೆ ಅಪಾಯ ಮಾಡಿಕೊಳ್ಳುವುದಿಲ್ಲವೆಂದು ಮಾತು ಕೊಡಬೇಕು. ಆ ಮಾತು ಕೊಡುವವರೆಗೂ ಕಾಲು ಬಿಡುವುದಿಲ್ಲ.'

'ಆ ಮಾತು ಕೇಳಿ ವೆಂಕಟಸುಬ್ಬಯ್ಯನವರ ಮೈ-ಮನಸಿಗೆ ಒಮ್ಮೆಲೆ ಉರಿ ಹತ್ತಿಸಿದಂತಾಯಿತು.

'ಚಂದ್ರಾ...ನಿನಗೆ ನನ್ನ ಮೇಲೆಷ್ಟು ಪ್ರೀತಿ...ಈಗಲೂ ನನ್ನ ಚಿಂತೆಯೇ?'

'ಮಾತುಕೊಡಿ ದೊರೆ.'

'ಈ ಪಾಪಿಯ ಜೀವಕ್ಕೆ ಇಷ್ಟು ಬೆಲೆಯೇ? ದೇವತೆ ಕಾಲುಕಟ್ಟಿ ಬೇಡಬೇಕೇ? ಆಗಲಿ ಚಂದ್ರಾ....ನಿನ್ನ ಮಾತಿಗೆ ಇಲ್ಲವೆನ್ನಲಾರೆ.'

'ಆ ಮಾತುಕೇಳಿ ಚಂದ್ರಾ ಮೇಲೆದ್ದು ನಿಂತು ಹೇಳಿದಳು—

'ಇನ್ನು ಹೋಗಿ... ಈ ಕೂಪದಿಂದ ಹೋಗಿ....ಆದರೆ...ಹೋಗುವ ಮುನ್ನ ಕಡೆಯ ಬಾರಿಗೆ...'

'—ಎಂದು ಆ ಮಾತು ಆಡಲಾಗದೆ ಚಂದ್ರಾ ತುಟಿಯೊಡ್ಡಿದಳು. ತನ್ನ ಜೀವನವನ್ನೇ ಧಾರೆ ಎರೆದಂತೆ, ಮುತ್ತಿಟ್ಟು ವೆಂಕಟಸುಬ್ಬಯ್ಯ ನಿಲ್ಲಲಾರದೆ ಓಡಿದರು. ಕುರುಡನಂತೆ, ಗೋಡೆ, ಬಾಗಿಲು ಕಾಣದೆ ತಡವರಿಸುತ್ತಾ ಓಡಿದರು...

ಸಿಡಿಲು ಹೊಡೆದ ಮರುಗಳಿಗೆಯಂತೆ, ಧಿಗ್ಗನೆ ಮೌನಕವಿಯಿತು ಕೋಣೆಯಲ್ಲಿ, ಆಕೆಯ ಬಾಳಿನಲ್ಲಿ. ಬರಿದಾದ ಬಾಳಿನಲ್ಲಿ ರುದ್ರಮೌನದ ಪ್ರಳಯ ತಾಂಡವ ನಡೆಯಿತು. ಒಂದು ಗಳಿಗೆ ಬರಿದಾದ ಬಾಗಿಲನ್ನು ದಿಟ್ಟಿಸುತ್ತಾ, ಎಚ್ಚರದಪ್ಪಿದಂತೆ ನಿಂತಿದ್ದಳು ಚಂದ್ರಾ, ಇದ್ದಕ್ಕಿದ್ದ ಹಾಗೇ ಕತ್ತಲ ಮಳೆ ಸುರಿದಂತಾಗಿ, ಹುಚ್ಚಾಗಿ ಕೋಣೆಯನ್ನೆಲ್ಲಾ ದಿಟ್ಟಿಸಿದಳು....

'ಮಂಚ....ಹೂಮಾಲೆ.... ಕಂಚಿನ ವಿಗ್ರಹ....ಪರಿಮಳ ಧೂಪ... ಅಗ್ನಿಚಕ್ರದಂತೆ ಸುತ್ತಿ, ಅವಳೆದೆಯ ಮೇಲೆ ಎರಗಿತು. ಆ ಹೊಡೆತವನ್ನು ತಾಳಲಾರದಂತೆ, ತತ್ತರಿಸಿ ಝೊಂಪಿಸಿ ಕೆಳಗೆ ಬಿದ್ದಳು. ಹೆಪ್ಪುಗಟ್ಟಿದ ಮೌನ, ಕಿಡಿ ಸೋಕಿದ ಮದ್ದಿನಂತೆ ಆಸ್ಫೋಟನವಾಗಿ ಅಳು ಹೊರ ಹೊಮ್ಮಿತು.

'ಚಂದ್ರಾ ಬಿಕ್ಕಿ ಬಿಕ್ಕಿ ಅತ್ತಳು, ನೆಲದಲ್ಲಿ ಹೊರಳಾಡಿದಳು-ಹುಚ್ಚಿಯಂತೆ ಮಂಚವನ್ನು ವಿಗ್ರಹವನ್ನೂ ನೆಲವನ್ನೂ ತಬ್ಬಿ ಅತ್ತಳು. ಮೃದುವಾದ ರತ್ತಗಂಬಳಿಯಲ್ಲಿ ಆತನ ಹೆಜ್ಜೆಯ ಗುರುತಿದ್ದ ಕಡೆ ಹೂವು ಹಾಕಿ ಮುತ್ತಿಟ್ಟಳು. ಮಂಚಕ್ಕೆ ಹಾಕಿದ ಹೂ ಮಾಲೆಗಳನ್ನು ಕಿತ್ತು ಮೈ ಮೇಲೆ ಹಾಕಿಕೊಂಡಳು. ಓಡಿ ಹೋದ ಅವರನ್ನು ಹಿಡಿಯುವಂತೆ ಓಡಿದಳು. ಗೋಡೆಗೆ ಹಣೆ ಘಟ್ಟಿಸಿದಳು. 'ನೀವಿಲ್ಲದೆ ನಾನು ಬದುಕಲಾರೆ ದೊರೇ....' ಎಂದು ಚೀರಿ ಕೆಳಗುರುಳಿದಳು-ಕೀಲು ಕಳಚಿದ ತಾರೆಯಂತೆ.

XXXXX

'ಮರುದಿನ ಚಂದ್ರಾಸಾನಿ ಮೂಗುಬೊಟ್ಟಿನ ವಜ್ರವನ್ನು ಅರೆದು ಕುಡಿದು ಮೃತಳಾದಳೆಂದು ತಿಳಿದು, ಊರಿನ ಜನ ವ್ಯಥೆ ಪಟ್ಟರು. ಅನಂತಯ್ಯ ಮೂರು ದಿನ ವೆಂಕಟಸುಬ್ಬಯ್ಯನವರನ್ನು ಮನೆಯಿಂದ ಹೊರಗೆ ಬಿಡಲಿಲ್ಲ. ಊಟ, ನಿದ್ರೆಯನ್ನು ಬಿಟ್ಟು ನಾಲ್ಕಾರು ದಿನಸುಮ್ಮನೆ ಕಂಬನಿಗರೆಯತ್ತಾ ಶಿಲಾವಿಗ್ರಹದಂತೆ ಕುಳಿತಿದ್ದ ಅವರು ಹೇಳಿದರು—

'ಹೆದರ ಬೇಡಿ ಮಾವ, ನಾನು ಸಾಯುವುದಿಲ್ಲ. ನನ್ನ ದೇವತೆಗೆ ಮಾತು ಕೊಟ್ಟಿದೇನೆ.'

'ಏನೆಂದು?'

'ನನ್ನ ಕೈಯಾರೆ ಜೀವಕ್ಕೆ ಅಪಾಯ ಮಾಡಿಕೊಳ್ಳುವುದಿಲ್ಲವೆಂದು. ತಾನು ಸಾಯುವ ನಿಶ್ಚಯ ಮಾಡಿ, ನನ್ನ ಬದುಕಿಗೆ ಭದ್ರತೆ ಮಾಡಿದಳು ನನ್ನ ಚಂದ್ರಾ...'

'ಆ ಮಾತು ಕೇಳಿ ಅನಂತಯ್ಯನವರಿಗೂ ತಡೆಯಲಿಲ್ಲ. ಮಗುವಿನ ಹಾಗೆ ಅತ್ತು ಹೇಳಿದರು.

'ಆಕೆ ಈ ಲೋಕದ ಹೆಣ್ಣಲ್ಲ, ದೇವತೆ.'

೧೫

'ಹೀಗೆ ಎಲ್ಲರ ಕೈಲೂ ದೇವತೆ ಎಂದು ಹೊಗಳಿಸಿಕೊಂಡು, ಪುಣ್ಯಾತಗಿತ್ತಿ ಕೈಲಾಸ ಸೇರಿದಳು.' ಎಂದಳು ತಾನೂ ಅಳುತ್ತಲೇ ಕಥೆ ಮುಗಿಸುತ್ತಾ ಪುಟ್ಟತಾಯಮ್ಮ. ಅದನ್ನು ಕೇಳುತ್ತಿದ್ದ ನಮ್ಮ ಕಣ್ಣೂ ತೇವವಾಗಿತ್ತು.

'ನನಗಂತೂ ಆ ಕಥೆ ಕೇಳಿದ ಮೇಲೆ ಯಾವುದೋ ಪರಿಮಳಮಯ ಪವಿತ್ರ ಕಾಂತಿಯುತ ಲೋಕದಿಂದ, ಕೊಳಚೆಗೆ ಇಳಿದಂತಾಯಿತು, ಈ ಲೋಕದ ಅರಿವು. ಆ ಕತ್ತಲೆಯಲ್ಲಿ ಕೂತಿರಲಾರದೆ, ಪುಟ್ಟತಾಯಮ್ಮಗೆ ನಮಸ್ಕಾರ ಹೇಳಿ, ಎದ್ದು ಹೊರಬಂದೆ. ಬೀದಿಯ ಬಾಗಿಲ ಬಳಿ ಕುಳಿತಿದ್ದ ಲಕ್ಕವ್ವ—

'ಏನ್ರಣ್ಣಾ ಮನೆಗೆ ಬಂದು ಅಂಗೇ ಓಗ್ತಿರಾ. ಓಗ್ಲಿ, ಎಲಡಕೇಗಾದ್ರೂ ಎಲ್ಡಾಣೆ ಕೊಡಲ್ವಾ?' ಎಂದಳು. ಆಕೆಯನ್ನೇ ದಿಟ್ಟಿಸಿ ನೋಡಿದೆ. ಚಂದ್ರಾಸಾನಿಯಲ್ಲಿ ಆ

ವಂಶದಲ್ಲೇ ಹುಟ್ಟಿದ ಲಕ್ಕವ್ವ ಎಲ್ಲಿ, ಏಕೋ ಕನಿಕರವಾಯಿತು. ನನ್ನ ಮೇಲೆ ನನಗೇ ಸಿಟ್ಟು ಬಂತು. ಮಾತನಾಡದೆ, ಜೇಬಿನಲ್ಲಿದ್ದಷ್ಟು ಚಿಲ್ಲರೆಯನ್ನು ಆಕೆಯ ಕೈಗೆ ಹಾಕಿ, ಹೊರ ಬಂದು, ಚಿನ್ನಪ್ಪ ಬರುವುದನ್ನೇ ಕಾದೆ.

ಸ್ವಲ್ಪ ಹೊತ್ತಿನಲ್ಲಿ ಚಿನ್ನಪ್ಪನೂ ಹೊರಗೆ ಬಂದ. ಆತನ ಮುಖವೂ ಭಾರವಾಗಿತ್ತು. ಮಾತನಾಡದೆ ಬೀಡಿ ಎಳೆಯುತ್ತಾ ನಡೆದ. ನನಗೂ ಅದೇ ಸರಿ ಎನ್ನಿಸಿತು. ತಲೆ ಬಗ್ಗಿಸಿ ಹೆಜ್ಜೆ ಹಾಕಿದೆ. ಅಷ್ಟು ಹೊತ್ತಾದ ಮೇಲೆ, ಮೌನವೂ ಏಕೋ ದುಸ್ಸಹವಾಗಿ ಹೇಳಿದ—

'ಕಥೆ ಕೇಳುವಷ್ಟು ಹೊತ್ತೂ ಎಲ್ಲೋ ಕನಸಿನಲ್ಲಿದ್ದಂತಿತ್ತು' ಎಂದೆ.

'ದೊಡ್ಡೋರ ಬಾಳಿನ ಸಮಾಚಾರವೇ ಹಾಗೆ. ಕೇಳಿದರೆ ಕಥೆಯೇ ಕನಸೋ ಅನ್ನುವ ಹಾಗಿರುತ್ತದೆ.'

'ಚಂದ್ರಾಸಾನಿ-ವೆಂಕಟಸುಬ್ಬಯ್ಯ ಇವರ ಕಥೆ ಕೇಳಿದಾಗ ಯಾರು ದೊಡ್ಡವರು ಎಂದು ಹೇಳುವುದೇ ಕಷ್ಟವಾಗುತ್ತದೆ. ಅಂತೂ ತನ್ನ ಪ್ರೀತಿಗೆ ಬಾಳನ್ನೇ ಬಲಿ ಕೊಟ್ಟಳಲ್ಲಾ ತಾಯಿ.'

'ಅವರೂ ಅಷ್ಟೇ. ಆಕೆ ಇದ್ದಾಗ ಇರಲಿ, ಸತ್ತಮೇಲೂ ಆಕೆಗೇ ತಮ್ಮ ಬಾಳು ಮೀಸಲು ಮಾಡಿದರು'

'ಅಂದರೆ?'

'ಅದೆಲ್ಲಾ ನಿಧಾನವಾಗಿ ಹೇಳೋದು ಈಗ ಬ್ಯಾಡಿ. ಊಟ ಮುಗಿಸಿ ಮೈಗಷ್ಟು ವಿಶ್ರಾಂತಿ ಕೊಡಿ.'

'ಒಂದು ಕೆಲಸ ಮಾಡೋಣವೇ ಚಿನ್ನಪ್ಪ?'

'ಏನು ಹೇಳಿ?'

'ಹೇಗೂ ಇಲ್ಲಿಯವರೆಗೂ ಬಂದಿದೀರ. ಇವೊತ್ತು ನಮ್ಮ ಮನೆಯಲ್ಲೇ ಇದ್ದು ಬಿಡಿ. ಜೊತೆಗೇ ಊಟ ಮಾಡೋಣ. ಆಮೇಲೆ ವೆಂಕಟಸುಬ್ಬಯ್ಯನವರ ಕಥೆ ಪೂರಾ ಹೇಳಿ ಊರಿಗೆ ಹೋಗುವಿರಂತೆ. ಆಗಬಹುದೇ?'

'ಆಗಲೇಳಿ. ನನಗೇನು—ಶೆಟ್ಟಿ ಬಿಟ್ಟಲ್ಲೇ ಬಿಡಾರ'

ಮುಂದಿನ ಕಥೆ ಕೇಳುವ ಉತ್ಸಾಹದಿಂದ ಬೇಗ ಮನೆಗೆ ಹೋಗಿ, 'ರಾತ್ರಿ ಎಲ್ಲಿ ಹೋಗಿದ್ದೆ, ಎಲ್ಲಿ ಮಲಗಿದ್ದೆ, ಈತ ಯಾರು?' ಎಂಬ ಮನೆಯವರ ನೂರು ಪ್ರಶ್ನೆಗಳಿಗೆ ಅಸಹನೆಯ ಉತ್ತರಕೊಟ್ಟು, ಹೇಗೊ ಊಟ ಮುಗಿಸಿ, ಮತ್ತೆ ಕಥೆ ಕೇಳಲು ಕುಳಿತೆ. ಪಾಪ! ನಿದ್ರೆ ಬರುತ್ತಿತ್ತೋ ಏನೋ ಚಿನ್ನಪ್ಪನಿಗೆ. ಆದರೂ ನನ್ನ ಉತ್ಸಾಹಕ್ಕೆ ತಾನೂ ಬಲಿಯಾಗಿ, ಚಿನ್ನಪ್ಪ ಕಥೆ ಮುಂದುವರಿಸಿದ.

X X X X X

'ಚಂದ್ರಾಸಾನಿಯ ಸಾವು, ಆಕೆ ಇದ್ದಾಗ ಮರೆತುಹೋದ ಸಂಗೀತದ ಹುಚ್ಚನ್ನು ಮತ್ತೆ ಬಲವಾಗಿ ಹಿಡಿಸಿತು. ಆಕೆಗೆ ತಮ್ಮ ಒಲವನ್ನು ಅರ್ಪಿಸಿದಂತೆ, ಸಂಗೀತಕ್ಕೆ ತಮ್ಮ ಹೃದಯವನ್ನು ಅರ್ಪಿಸಿದರು. ಆಗಾಗ ಹಾಡ ಹಾಡುತ್ತಾ ಆಕೆಯ ನೆನಪು ಉಕ್ಕಿಬಂದು, ಹಾಗೇ ಕಂಬನಿಗರೆಯುತ್ತಾ ಕೈಯ ತಂಬೂರಿ ಜಾರಿ ಹೋದುದನ್ನೂ ಗಮನಿಸದೆ, 'ಚಂದ್ರಾ...ಚಂದ್ರಾ...' ಎಂದು ತಾಯನ್ನು ಕಳೆದುಕೊಂಡ ಎಳಗರುವಿನಂತೆ ಹಂಬಲಿಸುವರು. ಮತ್ತೆ ಕೆಲವು ಬಾರಿ, ಮಲಗಿದಾಗ ಆಕೆಯ ನೆನಪಾಗಿ ವಿಯೋಗ ವ್ಯಥೆಯ ದಳ್ಳುರಿಯಲ್ಲಿ ಬೇಯಲಾಗದೆ, ಅದನ್ನು ಮರೆಯಲು ತಂಬೂರಿ ಹಿಡಿದು ಹಾಡಲಾರಂಭಿಸುವರು. ಹಾಗೇ ಹಾಡಹಾಡುತ್ತಾ ಅರೆಮರೆವಾಗಿ, ಆಕೆ ಬಂದು ಅವರನ್ನು ನೇವರಿಸಿ ಸಂತೈಸಿದಂತಾಗುವುದು. ತಂಬೂರಿಯನ್ನೇ ತಬ್ಬಿಮಲಗುವರು.

'ಹೀಗೇ ಬಿಟ್ಟರೆ ಅವರಿಗೆ ಬುದ್ಧಿ ಕೆಡಬಹುದೆಂದು ಮನೆಯಲ್ಲಿ ಅವರಿಗೆ ಮದುವೆ ಮಾಡುವ ಯೋಚನೆ ಮಾಡಿದರು—ಆದರೆ ಏನೆಂದರೂ, ಎಷ್ಟು ಹೇಳಿದರೂ ಅದಕ್ಕೆ ವೆಂಕಟಸುಬ್ಬಯ್ಯನವರು ಒಪ್ಪಲಿಲ್ಲ.

'ಅವಳ ಬಾಳು ನನಗಾಯಿತು. ನನ್ನ ಬಾಳ ಅವಳಿಗೆ ಮೀಸಲು. ಬೇರೆ ಹೆಣ್ಣಿಲ್ಲ ನನಗೆ ತಾಯದಿರು. ಆಕೆಯ ಮಾತಿಗಾಗಿ ಜೀವ ಹಿಡಿದಿದೇನೆ. ಆಕೆಯ ಆಸೆ ಸಾಧಿಸಲು ಬದುಕುತ್ತೇನೆ' ಎಂದು ಬಿಟ್ಟರು.

'ಅದನ್ನು ಸಾಧಿಸುವುದಕ್ಕೇ ಎಂಬಂತೆ ಸಂಗೀತಾಭ್ಯಾಸಕ್ಕೆ ತೊಡಗಿದರು. ಬರೀ ಅಭ್ಯಾಸವಲ್ಲ, ಅದು ತಪಸ್ಸು. ಪಂಚಾಗ್ನಿಯ ಮಧ್ಯೆ ಕುಳಿತು ತಪಸ್ಸು ಮಾಡುವ ಋಷಿಯಂತೆ, ವೆಂಕಟಸುಬ್ಬಯ್ಯ ವಿಯೋಗ ವ್ಯಥೆಯ ದಳ್ಳುರಿಯ ಮೇಲೆ ಕುಳಿತು, ಸಂಗೀತ ತಪಸ್ಸಿಗೆ ತೊಡಗಿದರು. ಬರಬರುತ್ತಾ ಸಂಗೀತ ಸಾಧನೆಯಲ್ಲಿ ಆಕೆಯ ಮೈಯ ನೆನಪು ಮಾಸಿ ನಿರಾಕಾರವಾದ ಒಲವೇ ನಾದರೂಪ ತಾಳಿ ಸಂಗೀತವಾಯಿತು. ಹಾಡುವಾಗ, ಹಾಡುವಷ್ಟು ಕಾಲವೂ ಆಕೆಯ ಸಾಮೀಪ್ಯದಲ್ಲಿದ್ದಂತಾಗುವುದು. ಅವರಿಗೆ ಒಂದೊಂದು ವೇಳೆಯಂತೂ ಮೈಮರೆತು ಹಾಡುವಾಗ, ಆಕೆ ಮೈದಾಳಿ ಬಂದು ಎದೆಯೊರಗಿ ಕುಳಿತಂತೆ ಭಾಸವಾಗುವುದು. ಆ ಹೊತ್ತಿನಲ್ಲಿ ಹಾಡುವುದನ್ನು ಮರೆತು, ಈ ಅನುಭವ ಏಕಾಯಿತೆಂದು ಚಿಂತಿಸುವರು. ಹಾಗೆ ಚಿಂತಿಸುವಾಗ ಒಮ್ಮೆ ಇದ್ದಕ್ಕಿದ್ದ ಹಾಗೇ ಅನಂತಯ್ಯ ಹಿಂದೆ ಹೇಳಿದುದು, 'ನಿನ್ನ ಬಯಕೆಯೊಂದು ಶಕ್ತಿ, ಪ್ರಬಲ ಶಕ್ತಿ. ಅದು ತೀವ್ರವಾದಷ್ಟೂ, ಉತ್ಕಟವಾದಷ್ಟೂ ಪರಿಣಾಮಕಾರಿಯಾಗುತ್ತದೆ ಎಂದುದು ನೆನಪಾಗಿ ಕತ್ತಲಲ್ಲಿ ಬೆಳಕು ಹೊಳೆದಂತಾಯಿತು. ಅವರ ಸಂಗೀತಾಭ್ಯಾಸದಲ್ಲಿ ಹಿಂದೆ ಕಾಣದ ಉತ್ಕಟತೆ ಕಾಣಿಸಿತು. ಸಂಗೀತವನ್ನು ಸಾಧಿಸಿಕೊಂಡರೆ, ಆಕೆಯನ್ನು ಸಾಧಿಸಿಕೊಂಡೇನೇನೋ ಎಂದು ಸಾಧನೆಗೆ' ತೊಡಗಿದರು. ಒಂದೊಂದು ಸ್ವರವನ್ನೂ ಸಾಧಿಸಲು ಹೊರಟರು. ಒಂದೊಂದು ಸ್ವರವೂ, ರಾಗದಲ್ಲಿ ಕೋಮಲವಾಗಲಿ, ತೀವ್ರವಾಗಲಿ, ಶುದ್ಧವಾಗಿ ನುಡಿಯಬೇಕು-ಓಂಕಾರ ನುಡಿವ ಗಂಟೆಯಂತೆ.

ಗಂಟೆಗಟ್ಟಲೆ, ಏಕೆ, ದಿನಗಟ್ಟಲೆ ಒಂದೊಂದೇ ಸ್ವರ ಸಾಧಿಸುತ್ತಾ ಕುಳಿತು ಬಿಡುವರು. ಒಮ್ಮೆ ಅದು ಖಚಿತವಾಗಿ ನುಡಿಯಿತೆಂದು ಮನಸಿಗೆ ಬೋಧೆಯಾದಾಗ, ಸುತ್ತಿ ಸುತ್ತಿ ಮತ್ತೆ ಅದೇ ಸ್ವರವನ್ನು ನುಡಿಯವರು-ಸುತ್ತಲೂ ಬಲೆ ಹಾಕಿ, ಮಿಗ ತಪ್ಪಿಸಿಕೊಳ್ಳದಂತೆಮಾಡಿ ಹಿಡಿವ ವ್ಯಾಧನಂತೆ. ಹಾಗೆ ಸ್ವರ ಶುದ್ಧವಾಗಿ ರೂಪುಗೊಂಡಾಗ, ತಟಕ್ಕನೆ ಅವರ ಕಣ್ಣೆದುರು ಕಿಡಿ ಹಾರಿದಂತಾಗುವುದು.

’ಸಾಧನೆ ಬಲಿತಂತೆ, ಅವರ ಕಲ್ಪನೆಯೂ ಬೆಳೆಯಿತು. ಚಿತ್ತ ಭಾವದಿಂದ ರಂಗಾದುದೇ ರಾಗವಲ್ಲವೇ? ನಾದದಲ್ಲಿ ಆ ಭಾವಶಕ್ತಿಯನ್ನು ತುಂಬ ತೊಡಗಿದರು. ಸ್ವರ ಖಚಿತವಾಗಿ ಮೂಡಬೇಕು, ಹಾಗೆ ಮೂಡಿದುದು, ಭಾವವನ್ನು ಬಿತ್ತರಿಸಬೇಕು. ಹೃದಯದ ವೇದನೆ ಕಂಬನಿಯಾಗಿ ಅವತರಿಸುವಂತೆ, ಆನಂದ ಮಂದಹಾಸವಾಗಿ ಮೂಡುವಂತೆ ಹಾಡೂ ಕಂಬನಿಯಂತೆ, ಮಂದಹಾಸದಂತೆ ಮೂಡಿಬರಬೇಕು. ಅದು ಅದೇ ಎಂದು ಕುರುಡನಿಗೂ ಅರಿವಾಗಬೇಕು. ಭಾವ ನಾದಗಳ ಸಮನ್ವಯಮಾಡಿ, ನಾದಚಿತ್ರ ರಚಿಸುವ ದಾರಿಯಲ್ಲಿ ಅವರ ಸಾಧನೆ ಮುಂದುವರಿಯಿತು—

ಅಂಥ ಹೊತ್ತಿನಲ್ಲಿ ಅವರು ಹಾಡುವುದನ್ನು ಕೇಳಿದಾಗ, ಕೇಳುವವರಿಗೆ ಹುಚ್ಚು ಹಿಡಿದಂತಾಗುವುದು. ವೆಂಕಟಸುಬ್ಬಯ್ಯನವರ ಎದೆಯನ್ನು ದಹಿಸುವ ವ್ಯಥೆ ಅವರದಾಗಿ, ಅವರೂ ’ಅಯ್ಯೋ’ ಎಂದು ಹಂಬಲಿಸುವರು. ಹಾಡು ಬೆಂಕಿಯಾಗಿ ಅವರ ಎದೆಯನ್ನು ದಹಿಸುವುದು.

’ಅಬ್ಬಾ! ಇದೇನು ಅದ್ಭುತ’ ಎಂದುಕೊಳ್ಳುವರು ಆದರೆ ಅವರಿಗೆ ಮಾತ್ರ ತೃಪ್ತಿಯಿಲ್ಲ. ತುಂಬು ಹೊಳೆಯ ನಡುವೆ ಬೆಟ್ಟಗಲದ ಜಾಗ ಬತ್ತಿದಂತೆ, ಏಕೋ ಅರಕೆ ಕಾಣುವುದು.

’ಒಂದು ದಿನ ಹೀಗೇ ಹಾಡುತ್ತಾ ಕುಳಿತಿದಾರೆ-ತೋಡಿ ರಾಗವನ್ನು. ತ್ರಿಲೋಕ ಸುಂದರಿಯಾದ ಜಗನ್ಮಾತೆಯ ವೀಣಾನಾದವನ್ನು ಕೇಳಿ, ಜೀವ ಹಿಂಡು ಆಕೆಯ ಬಳಿ

ಬಂದು ಮುತ್ತುವುದಂತೆ ಆ ರಾಗ ಹಾಡಿದಾಗ. ಅಂದು ಅವರ ಬಾಯಲ್ಲಿ ಆ ರಾಗವನ್ನು ಕೇಳುತ್ತಿರುವವರಿಗೂ ಹಾಗೇ ಆಗಿತ್ತು. ರಾಗ ತನ್ನ ಶಿಖರ ಮುಟ್ಟಿದೆ ಎನ್ನುವಾಗ, ತಂಬೂರಿ ಅವರ ಕೈಯಿಂದ ಜಾರಿ, ಕಂಬನಿ ಹರಿಯತೊಡಗಿತು. ಸುಮ್ಮನೆ ಅಳತೊಡಗಿದರು. ಕೇಳ ಬಂದವರಿಗೆ ಆ ಅವಸ್ಥೆಯಲ್ಲಿ ಅವರನ್ನು ಮಾತನಾಡಿಸಲು ಧೈರ್ಯ ಸಾಲದೆ, ಸದ್ದು ಮಾಡದೆ ಎದ್ದು ಹೋದರು. ಆ ದಿನ ಅನಂತಯ್ಯನವರೂ ಅಲ್ಲಿದ್ದರು. ಎಲ್ಲರೂ ಹೋದಮೇಲೆ ಅನಂತಯ್ಯ ತಂಬೂರಿಯಲ್ಲಿ ಮುಖ ಮರೆಸಿ, ಹಸುಳೆಯಂತೆ ಅಳುತ್ತಿದ್ದ ಸೋದರಳಿಯನನ್ನು ಎಬ್ಬಿಸಿ—

’ಏನಾಯಿತು ವೆಂಕಟಸುಬ್ಬೊ, ಈ ಅಳುವೇಕೆ’ ಎಂದು ಕೇಳಿದರು.

’ಕೈಗೆ ಬಂದ ತುತ್ತು ಬಾಯಿಗಿಲ್ಲ ಮಾವಾ. ನೆಲಕ್ಕೆ ತಲೆ ಹೊಡೆದುಕೊಂಡು ಪ್ರಾಣ ಒಪ್ಪಿಸಬೇಕೆನ್ನುವಷ್ಟು ವ್ಯಥೆಯಾಗುತ್ತದೆ.’

’ಏಕೆ?’

’ಹಾಡುವಾಗ ಎದೆಯಲ್ಲಿ ಸಾವಿರ ಭಾವ ಚಿಮ್ಮುತ್ತವೆ. ಎಲ್ಲವನ್ನೂ ಹಾಡುತ್ತೇನೆ ಎಂದು ಹೊರಟರೆ ಹತ್ತು ಸಿಗುತ್ತವೆ, ನೂರು ಜಾರಿಕೊಳ್ಳುತ್ತವೆ. ಹಾಳು ಕಂಠ ನುಡಿಯಲು ಸೋಲುತ್ತದೆ.... ನುಡಿಯದ ನರವನ್ನು ಹರಿದುಬಿಡಬೇಕು ಎನಿಸುತ್ತದೆ.’ ಉದ್ವೇಗದಿಂದ ಹೇಳಿದರು ವೆಂಕಟಸುಬ್ಬಯ್ಯ.

’ಇರಲಿ ಬಿಡು, ತಪ್ಪಲ್ಲ. ಸಾತ್ವಿಕ ಅತೃಪ್ತಿ ಪ್ರಗತಿಯ ತಾಯಿ. ಕಂಠ ಇನ್ನೂ ಪಳಗಲಿ.’

’ಕಂಠದ್ದೊಂದೇ ಅಲ್ಲ ಮಾವ...’

’ಮತ್ತೆ?’

’ರಾಗವೂ ಅಷ್ಟೆ, ಏನೋ ಸಾಲದು ಎನಿಸುತ್ತದೆ’

'ಬಹುಶಃ ನಿನ್ನ ಸಾಧನೆಯಲ್ಲಿ ಲೋಪವಿರಬೇಕು.'

'ನಿನ್ನ ಮನಸಿನಲ್ಲಿ ಇನ್ನೂ ಹಸಿ ಇದೆ. ನಾನು ಬಲ್ಲೆ ವೆಂಕಟಸುಬ್ಬು. ಇನ್ನೊಂದು ಮೆಟ್ಟಿಲು ನೀನು ಮೇಲೇರಬೇಕು.'

'ಹಾಗಂದರೇನು ಮಾವ? ಏನು ಹಸಿ ಇದೆ ನನ್ನಲ್ಲಿ...'

'ನಿನ್ನ ಭಾವನೆಗಳು ವ್ಯಕ್ತಿ ಮಟ್ಟವನ್ನು ಬಿಟ್ಟು ವಿಶ್ವದ ಮಟ್ಟಕ್ಕೆ ಏರಿಲ್ಲ; ಮಾನವತ್ವದ ಮೆಟ್ಟಿಲು ದಾಟಿ ದೇವತ್ವದ ಮೆಟ್ಟಿಲು ಸೇರಿಲ್ಲ.'

'ನಿನ್ನ ಮಾತು ಅರ್ಥವಾಗದ ಒಗಟಿಯಂತಿದೆ ಮಾವ. ಕೊಂಚ ಬಿಡಿಸಿ ಹೇಳಬಾರದೇ?'

'ಹೇಳಿಕೊಟ್ಟು ಕಲಿಸುವ ಕಾಲವೂ ಇತ್ತು ವೆಂಕಟಸುಬ್ಬು, ಈಗ ನೀನೇ ಸ್ವಾನುಭವದಿಂದ ಕಲಿಯುವ ಕಾಲ. ಯೋಚಿಸಿ ನೋಡು. ನಿನಗೇ ತಿಳಿಯುತ್ತದೆ. ನಿನ್ನ ಹೃದಯದಲ್ಲಿರುವ ಸೌಂದರ್ಯ, ಪ್ರೇಮದ ಬಯಕೆ ಎಲ್ಲವೂ ಅಣುವಿನಿಂದ ಬೃಹತ್ತಾಗಲಿ. ಕೆರೆಯನ್ನು ಬಿಟ್ಟು ಕಡಲಿಗಿಳಿ. ಮನುಷ್ಯ ಕೊಡಬಹುದಾದುದು ಒಪ್ಪತ್ತಿನ ಊಟ. ಹಸಿವನ್ನೇ ತೀರಿಸುವ ಅಮೃತ ದೇವರೇ ಕೊಡಬೇಕು. ಅಲ್ಲವೇ?' ಎಂದರು ಅನಂತಯ್ಯ. ಆ ಮಾತು ಕೇಳಿ ವೆಂಕಟಸುಬ್ಬಯ್ಯನವರಿಗೆ, ಏನೊ ಮಸಮಸಕಾಗಿ ಕಂಡಂತಾಯಿತು.

'ರಾಗಧ್ಯಾನದೊಂದಿಗೆ, ಆ ಮಾತಿನ ಚಿಂತನೆಗೂ ತೊಡಗಿದರು ಅವರು. ಅಣು ಬೃಹತ್ತಾಗುವುದು, ವ್ಯಕ್ತಿ ವಿಶ್ವವಾಗುವುದು ಎಂದರೇನು? ಏನು ದಾರಿ ಹಾಗಾಗಲು? ತಮ್ಮ ಆಂತರಂಗವನ್ನೆ ಮಥಿಸಿದರು. ತಮ್ಮ ಬಯಕೆಯನ್ನು ಎಳೆಎಳೆಯಾಗಿ ಹಿಂಜಿ ನೋಡಿದರು. ಎಷ್ಟೋ ತಿಂಗಳು ನಡೆಯಿತು ಈ ಮನೋಮಥನ.

’ಒಂದು ದಿನ ಅವರು ಏಕೋ ತಮ್ಮ ಕೋಣೆಯಲ್ಲಿ ತೂಗಾಡುತ್ತಿದ್ದ ಕನ್ನಡಿಯಲ್ಲಿ ಕಾಣುವ ತಮ್ಮ ಪ್ರತಿಬಿಂಬವನ್ನು ನೋಡಿದರು. ಆ ಕನ್ನಡಿಯಲ್ಲಷ್ಟೇ ಅಲ್ಲ, ಅದರ ಇದಿರು ಬದಿಯ ಗೋಡೆಯಲ್ಲಿದ್ದ ಕನ್ನಡಿಯಲ್ಲೂ ತಮ್ಮ ಪ್ರತಿಬಿಂಬ ಕಾಣುತ್ತಿದೆ. ಹತ್ತು ಕನ್ನಡಿಗಳಿದ್ದರೆ ಹತ್ತರಲ್ಲೂ ಕಾಣುತ್ತಿತ್ತು. ತಾವು ಇರುವುದೊಬ್ಬರು. ಆದರೆ ಕನ್ನಡಿಯಲ್ಲಿ ಹತ್ತಾಗಿ ಕಾಣುತ್ತಾರೆ. ಈ ಹತ್ತರ ಮೂಲವೂ ಒಂದೇ. ಜಗತ್ತಿನಲ್ಲಿ ಸಾವಿರವಾಗಿ ಕಾಣುವುದರ ಮೂಲವೂ ಒಂದೇ. ಹಾಗೇ ಮನಸು ಚಿಂತನೆ ಮಾಡಿತು. ಅಲ್ಲೂ ಅದೇ ಏಕಮೇವಾದ್ವಿತೀಯವಾದ ಸತ್ಯ ಗೋಚರಿಸಿತು. ಆ ಮಾತು ಅಂವಾಗಿ ಮೇಲೇರಲು ಏಣಿ ಸಿಕ್ಕಂತಾಯಿತು. ಎಲ್ಲೆಡೆಯಲ್ಲೂ ಅವರಿಗೆ ತಮ್ಮ ಪ್ರೇಯಸಿಯ ರೂಪು ಕಂಡಿತು; ಒಲವು ಸರ್ವಾಂತರ್ಯಾಮಿಯಾಗಿರುವುದು ಕಾಣಿಸಿತು; ಕಿಡಿ ಕರಗಿ ಬೆಳಕಿನ ಕಡಲಾಯಿತು. ಅಗಲಿದ ಒಲವು ಜಗನ್ಮಾತೆಯಾಗಿ ಕಂಡಿತು; ಬಯಕೆ, ವಿರಹ, ಕಾತುರ—ಭಕ್ತಿಯಾಯಿತು. ಜಗನ್ಮಾತೆಯ ವಿಶ್ವವಾತ್ಸಲ್ಯ ತಾಯಿಯಾಗಿ ಬಂದು ತನ್ನನ್ನು ತೊಟ್ಟಲಿನಲ್ಲಿಟ್ಟು ತೂಗಿದಂತೆ, ಚಂದ್ರಾ ಆಗಿ ಬಂದು ತೊಳಲ್ಲಿದ್ದು ನಲಿಸಿತು. ಅಲ್ಲಿ ಮಾತೆಯಂತೆ ಚುಂಬನ, ಇಲ್ಲಿ ಪ್ರೇಯಸಿಯಂತೆ ಆಲಿಂಗನ-ಎಲ್ಲದರ ಮೂಲವೂ ಒಂದೇ. ’ಏಕಂ ಸದ್ವಿಪ್ರಾ ಬಹುದಾವದಂತಿ’. ಸತ್ಯವನ್ನು ಮುಚ್ಚಿದ ಅಸತ್ಯದ ಬಂಗಾರದ ತಟ್ಟೆ ಸರಿದು, ಸತ್ಯ ಸೂರ್ಯ ಮುಕ್ತ ಪ್ರಕಾಶದಿಂದ ಥಳಥಳಿಸಿದ. ವೆಂಕಟಸುಬ್ಬಯ್ಯನವರ ಕಣ್ಣು ತೆರೆಯಿತು.

ಅಂದು ಅವರಿಗೆ ಬುವಾ ಹೇಳಿದ ಮಾತು ನೆನಪಾಯಿತು. ’ಪ್ರಣವ ಸ್ವರೂಪನಾದ ಭಗವಂತನನ್ನು ನಾದೋಪಾಸನೆಯಿಂದ ಸಾಧಿಸಬಹುದು.’

’ಅಂದಿನಿಂದ ವೆಂಕಟಸುಬ್ಬಯ್ಯ ಹೊಸದಾರಿ ಹಿಡಿದರು. ಸಂಗೀತ ಸಾಧನೆ ನಾದೋಪಾಸನೆಯಾಯಿತು. ಒಂದೊಂದು ರಾಗವೂ ದೇವತೆಯನ್ನು ಒಲಿಸಿಕೊಳ್ಳುವ ದಿವ್ಯ ಮಂತ್ರವಾಯಿತು. ಅವರ ಹಾಡುಗಾರಿಕೆಯಲ್ಲಿ ಹಿಂದೆಂದೂ ಕಾಣದ ಪರವಶತೆ ಕಾಣತೊಡಗಿತು. ಹಾಡಹಾಡುತ್ತಾ ಅವರ ಕಂಠವೊಂದೇ ಅಲ್ಲ, ಮೈಯ

ಅಣುಅಣುವೂ ವೀಣೆಯಯಂತಾಗಿ ಹಾಡತೊಡಗುವುವು. ಅವರ ಸುತ್ತಲೂ ನಾದ ಸಮುದ್ರ ನೆರೆಯೇರಿದಂತಾಗಿ ಅದರಲ್ಲಿ ಮುಳುಗಿ, ಮೈ ಮರೆಯವರು. ಉರಿಬಿಸಿಲು ಕಾವಾರಿ ಹಾಲು ಬೆಳದಿಂಗಳಾದಂತಾಗುವುದು.

'ಒಂದು ದಿನ ರಾತ್ರಿ ಮಲಗಿದ್ದ ವೆಂಕಟಸುಬ್ಬಯ್ಯನವರಿಗೆ ಏಕೋ ತಟಕ್ಕನೆ ಎಚ್ಚರಿಕೆಯಾಯಿತು. ಎದ್ದರು. ಎದೆಯಲ್ಲಿ ಏನೋ ವಿಚಿತ್ರ ವ್ಯಥೆ, ದಾಹ. ಏನೋ ಹೇಳಲಾಗದ ಹಂಬಲ ಹೃದಯದಲ್ಲಿ, ಎದ್ದು ಹೋಗಿ ನೀರು ಕುಡಿದು ಬಂದರು. ಆದರೂ ದಾಹ ಅಡಗಲಿಲ್ಲ. ಏನೋ ಬಯಕೆ, ಹಸಿವು, ಡೇಗೆಯಂತೆ ಅವರ ಕರುಳನ್ನು ಕುಕ್ಕುತ್ತಿತ್ತು. ಸುಮ್ಮನೆ ಕುಳಿತುಬಿಟ್ಟರು. ಬೇಡಬೇಡವೆಂದರೂ, ಗುರುತರಿಯದ ಯಾತನೆ ಪ್ರೇಯಸಿಯ ರೂಪತಾಳಿ ನಿಂತಿತು. ಅಂದೇ ಆಕೆಯಿಂದ ಆಗಲಿದಷ್ಟು ನೋವಾಗುತ್ತಿದೆ. ಆ ಬಯಕೆಯ ನೋವನ್ನು ದಮನ ಮಾಡುವ ದಾರಿ ಕಾಣಲಿಲ್ಲ. ಕಾಣದ ಬೆಂಕಿಯಂತೆ ಅವರ ಮೈಯನ್ನು ಸುಡುತ್ತಿತ್ತು ಆ ಕೊರಗು. ಅದನ್ನು ತಾಳಲಾರದೆ, ಸ್ನಾನದ ಮನೆಗೆ ಹೋಗಿ ಇದ್ದಷ್ಟು ತಣ್ಣೀರನ್ನು ಮೈಮೇಲೆ ಸುರಿದುಕೊಂಡರು. ಮೈ ತಣ್ಣಗಾಯಿತು. ಆದರೆ ಮನಸು ಉರಿಯುತ್ತಲೇ ಇತ್ತು. ಅದನ್ನು ಆರಿಸಲು ಬೇರಾವುದೂ ದಾರಿಗಾಣದೆ ಹಾಡಲೆಂದು ತಂಬೂರಿ ಹಿಡಿದ ಶ್ರುತಿ ಸೇರಿಸಿ ಕುಳಿತರು. ಅವರಿಗರಿವಾಗದಂತೆಯೇ ಭೈರವೀ ರಾಗ ಲಾಪ ಆರಂಭವಾಯಿತು.

'ಹಾಡು ಹೊರಹೊಮ್ಮಿದೊಡನೆಯೇ, ಸುತ್ತ ಮುತ್ತ ಭಯಂಕರವಾದ ಹೆಡೆಯಾಡಿಸಿ ಬೆದರಿಸುವ ಸರ್ಪಗಳು, ನಾದಮುಗ್ಧವಾಗಿ, ಹೆಡೆಯಡಗಿಸಿ ಮಲಗಿದಂತೆ, ತೀವ್ರ ವಿಹ್ವಲತೆಯ ತಾಂಡವದ ವೇಗ ಕಡಮೆಯಾಯಿತು. ರಥಕ್ಕೆ ಕಟ್ಟಿದ, ಹತ್ತಾರು ಕುದುರೆಗಳು ಹುಚ್ಚಾಗಿ, ಒಂದೊಂದು ಒಂದೊಂದು ಕಡೆ ಎಳೆಯುತ್ತಿದ್ದವು, ಅದನ್ನು ನಿಲ್ಲಿಸಿ, ಶಾಂತವಾಗಿ, ಒಮ್ಮುಖವಾಗಿ ಹೆಜ್ಜೆ ಹಾಕಿದಂತಾಯಿತು. ಆಜ್ಯಾಹುತಿಯಾದ ಬಳಿಕ ಸಹಸ್ರ ಜಿಹ್ವೆಯಿಂದ ಉಗ್ರನಾಗಿ ಪ್ರಕಟನಾದ ಅಗ್ನಿ ಕ್ರಮೇಣ ಶಾಂತನಾಗಿ, ಶುಭ್ರಶ್ವೇತನಾಗಿ, ಮಂಗಳಕರ ಕಾಂತಿಯ ಮಂದಹಾಸವನ್ನು

ಬೀರಿದಂತಾಯಿತು. ಪ್ರವಾಹ ಮತ್ತವಾಗಿ ಪ್ರಕ್ಷುಬ್ಧ ವೀಚಿಮಾಲೆಗಳಿಂದ ಎದೆಗೆಡಿಸಿದ ಏರು ನೆರೆ ನಿಧಾನವಾಗಿ ಇಳಿದು, ಗೆಜ್ಜೆಗಾಲಿನ ಸದ್ದುಮಾಡುತ್ತಾ ಹರಿವ ತರಂಗಿಣಿಯಾದಂತೆ, ಅವರ ಮೈಯನ್ನು ಕವಿದ ಉಗ್ರಯಾತನೆ ನಿಧಾನವಾಗಿ ಕರಗಿ ಶಾಂತತೆ ಮೂಡಿತು.

'ಎಲ್ಲೋ ಕಾಣದೆಡೆಯಿಂದ ಓಂಕಾರನಾದ ಮೂಡಿ ಬಂದು ವರ್ತುಲವರ್ತುಲವಾಗಿ ಅವರ ಎದೆಯ ಬಳಿ ಸಾರಿ, ಮತ್ತೆ ಸುತ್ತಲೂ ವ್ಯಾಪಿಸಿತು. ಆ ನಾದ ಗರ್ಭದಿಂದ ಸ್ಫುಲಿಂಗವೊಂದು ಸಿಡಿದುಬಂದು, ಬೆಳೆಬೆಳೆದು ಶ್ವೇತಾಗ್ನಿಗೋಲವಾಗಿ, ಉಜ್ವಲ ಶೀತಲ ಕಾಂತಿಯನ್ನು ಪಸರಿಸಿತು. ಆ ಬೆಳಕಿನೊಡಲಿನಲ್ಲಿ ಜನಿಸಿದಂತೆ, ದೇವತಾ ಸ್ತ್ರೀಯೊಬ್ಬಳು ದೂರದಿಂದ ಹತ್ತಿರ ಬಂದು ಕಾಣಿಸುತ್ತಿದಾಳೆ. ಬೆಳದಿಂಗಳಿನಲ್ಲಿ ಕಡೆದ ದಿವ್ಯ ಸುಂದರ ವಿಗ್ರಹ. ಶುಭ್ರ ಶ್ವೇತ ವಸನಧಾರಿಣಿಯಾದ ತಪಸ್ವಿನಿ. ಎರಡು ಕೈಗಳಲ್ಲೂ ಬಿಳಿಯ ಕಮಲ, ಭಕ್ತಿ ಭಾರದಿಂದ ಅರ್ಧ ನಿಮೀಲಿತವಾದ ಆಕೆಯ ನೇತ್ರಗಳಿಂದ ಪವಿತ್ರ ಕಾಂತಿ ಹೊರ ಹೊಮ್ಮುತ್ತಿದೆ. ಆಕೆಯ ಮುಖದಿಂದ ಹೊರಬಿದ್ದ ಓಂಕಾರನಾದ, ಪರಿವೇಶದಂತೆ ಆಕೆಯನ್ನು ಬಳಸುತ್ತಿದೆ. ಸಪ್ತ ಸ್ವರ ಕನ್ನಿಕೆಯರು ಆಕೆಯನ್ನು ಓಲೈಸುತ್ತಿದ್ದಾರೆ. ಆಕೆಯ ಚರಣದಡಿಯಲ್ಲಿ ಭಕ್ತನೋರ್ವನು ಮಲಗಿ 'ತಾಯಿ ಪ್ರಸನ್ನಳಾಗು' ಎಂದು ಬೇಡುತ್ತಿದ್ದಾನೆ. ಕಮಲದಂತೆ ತಾಯಿಯ ಕಣ್ಣು ಅರಳಿ, ತೃಪ್ತಿಯ ಮಂದಹಾಸ ಮೂಡಿದೆ ಆಕೆಯ ತುಟಿಯ ಮೇಲೆ. 'ನಿನಗೆ ನಾನು ಒಲಿದೆ' ಎಂಬಂತೆ ಆಕೆಯ ಬಲಗೈಯ ಕಮಲದ ಹೂವು ಭಕ್ತನ ಶಿರದ ಮೇಲೆ ಬಿದ್ದಿತು.....

'ತಾಯಿ! ಕೃಪಾಮಯಿ! ಇಂದು ನೀನು ನನಗೆ ಒಲಿದೆಯಾ?' ಎಂದು ಕೂಗಿದರು ವೆಂಕಟಸುಬ್ಬಯ್ಯ ಆನಂದೋನ್ಮಾದದಿಂದ. ಅವರು ಕಣ್ಣು ತೆರೆದಾಗ ಉಷಃಕಾಲದ ಅರುಣ ಕಾಂತಿ ನೆಲದ ಮೇಲೆ ಬೆಳಕಿನ ರಂಗವಲ್ಲಿ ಹಾಕುತ್ತಿತ್ತು. ವೆಂಕಟಸುಬ್ಬಯ್ಯನವರ ಹೃದಯದಲ್ಲಂದು ವಿಚಿತ್ರ ಶಾಂತಿ, ಅಪೂರ್ವ ಉತ್ಸಾಹ.

ಕಣ್ಣಲ್ಲಿ ಆನಂದಾಶ್ರು ಸುರಿಯುತ್ತಿತ್ತು. ಸುತ್ತಲು ಎತ್ತೆತ್ತಲೂ ಬೆಳಕು, ಶಾಂತಿ, ನಗುಗಳೇ ತುಳುಕುತ್ತಿರುವಂತೆ ತೋರಿತು ಅವರಿಗೆ. ಎದ್ದು ಹಾರುಗಾಲಿನಿಂದ ನಡೆದು, ದೇವರ ಮನೆಯ ಮಂಟಪದಲ್ಲಿದ್ದ ರಾಜರಾಜೇಶ್ವರೀ ವಿಗ್ರಹಕ್ಕೆ ಅಡ್ಡ ಬಿದ್ದರು. ಆ ವಿಗ್ರಹವೂ ಅವರನ್ನು ಕಂಡು ತೃಪ್ತಿಯಿಂದ ನಕ್ಕಂತಾಯಿತು.

'ಅಂದು ಅವರಿಗೆ ಭೈರವೀರಾಗ ಒಲಿಯಿತು. ಆ ರಾಗ ಹಾಡುವಾಗ ಅವರಿಗೆ ತಾಯಿ ಕಾಣಿಸುತಿದ್ದಳಂತೆ. ಕೇಳಿದವರಿಗೂ ಹಾಗೇ ಭಾಸವಾಗುತ್ತಿತ್ತಂತೆ. ಅದರ ಮೇಲೇ ವೆಂಕಟಸುಬ್ಬಯ್ಯನವರು 'ಭೈರವಿ ವೆಂಕಟಸುಬ್ಬಯ್ಯ' ನವರೆಂದು ಪ್ರಖ್ಯಾತರಾದರು; ಸಾಧಕರು ಸಿದ್ಧರಾದರು.'

೧೬

'ಹಾಗೇ ದಿನದಿನಕ್ಕೆ ಅವರ ಜೀವನ ಏರುತ್ತಾ ಹೋಯಿತು.' ಎಂದು ಹೇಳಿ, ತಾನು ಹೇಳುತ್ತಿದ್ದ ಕಥೆಯನ್ನು ಮುಗಿಸಿದ ಚಿನ್ನಪ್ಪ. ಅದನ್ನು ಕೇಳಿ ನಾನು ವಿಸ್ಮಯ ಮೂಕನಾಗಿದ್ದೆ.

'ನೀವೇ ಹೇಳಿ ಸ್ವಾಮಿ, ಈ ಕಾಲದಲ್ಲಿ ಅವರಹಾಗೆ ಸಂಗೀತ ಸಾಧಿಸೋರು ಯಾರಿದಾರೆ? ಯಾರಿಗೆ ಬೇಕಾಗಿದೆ? ಎಲ್ಲಾ ನನ್ನ ಹಾಗೆ ಹೊಟ್ಟೆ ಪಾಡಿಗೆ ಹಾಡೋ ಕಿಂದರಿ ಜೋಗಿಗಳು. ಬದುಕಿದ ಬಾಳಲ್ಲ, ಸತ್ತ ಸಾವಲ್ಲ. ನಾವೂ ಇದೀವಿ—ಅಷ್ಟೆ'

'ನಿಮ್ಮಂಥವರು ಹತ್ತು ಜನ ಕಲೆತು, ಸಂಗೀತ ಕಲೆಯನ್ನು ಮೇಲೆತ್ತಬೇಕು ಚಿನ್ನಪ್ಪ, ನಿರಾಶರಾದರೆ ಹೇಗೆ? ವೆಂಕಟಸುಬ್ಬಯ್ಯನಂಥವರು ಹುಟ್ಟಿದ ಸೀಮೆಯಲ್ಲಿ ಸಂಗೀತಕ್ಕೆ ಈ ದುರವಸ್ಥೆ ಬರಬೇಕೆ?'

’ಆ ಕಾಲ ಈಗಿಲ್ಲ ಸ್ವಾಮಿ. ಸಂಗೀತಗಾರರನ್ನು ಅಂದೇನು ಫಲ? ಆವರ ಹಾಗೆ ಜನ್ಮದುದ್ದಕ್ಕ್ಯೂ ಒಂದು ರಾಗ ಸಾಧಸ್ತೀನಿ ಅಂತ ಕೂತರೆ ಹೊಟ್ಟೆಗೆ ಹಾಕೋರು ಯಾರು? ಆ ಕಾಲದಲ್ಲಿ ರಾಗ ಒತ್ತೆ ಇಟ್ಟರೆ ಸಾವಿರ ಹೊನ್ನು ಕೊಟ್ಟರಂತೆ. ಈಗ ರಾಗ ಇರಲಿ, ನನ್ನನ್ನೇ ಒತ್ತೆ ಇಟ್ಟುಕೊಂಡರೂ, ಬೀಡಿಗೆ ಮೂರು ಕಾಸು ಕೊಡೊಲ್ಲ- ’ಮುಂದೆ ಹೋಗಿ ಬಾರೋ ದಾಸಯ್ಯ’ ಅನ್ತಾರೆ. ಶ್ರೀಮಂತರಿಗೆ ದುಡ್ಡು ಮಾಡೋ ದಾಹ, ಇಲ್ಲೋರಿಗೆ ಹೊಟ್ಟೆ ಆತುರ. ಇದ್ರಲ್ಲಿ ನಮ್ಮನ್ನ ಕೇಳೋರು ಯಾರು? ಬಡತನ ಹೋಗೊವರ್ಗೂ ಸಂಗೀತಾನೂ ಬದುಕೊಲ್ಲ, ನಾವೂ ಬದುಕೊಲ್ಲ. ಹೀಗೇ ಅಳ್ತಾ ಇರಬೇಕು.’ ಎಂದ ಚಿನ್ನಪ್ಪ.

’ಅದು ಹೋಗಲಿ. ಅವರು ನಾಲಿಗೆ ಕತ್ತರಿಸಿ ಕೊಂಡದ್ದೇಕೆ ಅಂತ ನಿನಗೇನಾದರೂ ಗೊತ್ತೆ ಚಿನ್ನಪ್ಪ?’

’ಊಹೂ ನನಗೆ ಗೊತ್ತಿಲ್ಲ. ತೊರೆಯೂರಿನಲ್ಲಿ ಅವರ ವಂಶದೋರು ಇದಾರಂತೆ. ಹಂಗಂತ ಕೇಳಿದೀನಿ, ಅಲ್ಲಿ ವಿಚಾರಿಸಿದ್ರೆ ಏನಾದ್ರೂ ಗೊತ್ತಾಗ್ಬೋದು.’

’ಇನ್ನಾರೂ ಇಲ್ಲವೆ?’

’ನನಗೆ ತಿಳಿದ್ದಂಗೆ ಯಾರೂ ಇಲ್ಲ.’

’ಅಂತೂ ನನಗೆ ನಿನ್ನಿಂದ ತುಂಬಾ ಉಪಕಾರವಾಯಿತು ಚಿನ್ನಪ್ಪ’

’ಏನೋ ಆಯ್ತು ಹೋಯ್ತು. ನಮ್ಗೂ ಹಿರೇರ ಹೆಸ್ರು ಜ್ಞಾಪ್ಕ ಮಾಡ್ಕೊಂಡ್ಹಂಗಾಯ್ತು. ನಾನಿನ್ನು ಬರ್ತೀನಿ. ಕ್ಯಾದಿಗ್ಗೆರೇಗೆ ಹೋಗ್ಬರ್ಬೇಕು.’

’ಏಕೆ?’

'ಅಲ್ಲಿ ಆಟ ಆಡ್ಸಿ ಆರು ತಿಂಗ್ಳಾಯ್ತು. ಕೊಡ್ತಿನೀಂದ ಕಾಸ್ನೂ ಕೊಡ್ಡೆ ಸತಾಯಿಸ್ತಾ ಅವ್ರೆ. ಹೋಗಿ ಏನಾರ ಸಿಕ್ರೆ ಎಬ್ಕೊಂಡು ಬರ್ತೀನಿ. ಇದೇ ನೋಡಿ ನಮ್ಮ ಬಾಳು, ನಮಗೆ ಸಿಗೋ ಮರ್ಯಾದೆ.'

ಎಂದ ಚಿನ್ನಪ್ಪ. ಆತನ ಖರ್ಚಿಗೆಂದು ಕೊಡಲು ಹೋದ ಹಣ ಮುಟ್ಟಲಿಲ್ಲ.

'ಹಿರೇನ ಹೆಸ್ರು ಹೇಳಿ ಕಾಸು ತಗೊಬಾರ್ದು ಅವರಿಗೆ ಗೌರವಾ ಅಲ್ಲ, ವಿಶ್ವಾಸಾ ಇರ್ಲಿ. ಅದೇ ಕೋಟಿ ಹಣ' ಎಂದು ಹೇಳಿ ಚಿನ್ನಪ್ಪ ಹೊರಟು ಹೋದ. ಆತನ ಚಿಂದಿ ಕೋಟು, ಅಲ್ಲಲ್ಲಿ ಹರಿದ ಕಡೆ ಗಂಟು ಹಾಕಿದ ಪಂಚೆ, ಮುಳ್ಳುಹಂದಿಯಂತೆ ಕೆದರಿದ ತಲೆಗೂದಲು, ಪಾದರಕ್ಷೆಯಿಲ್ಲದೆ, ಧೂಳು ತುಳಿದು ಬಿರಿದ ಬರಿಗಾಲು—ಎಲ್ಲವನ್ನೂ ನೋಡಿ ಕರಳು ಕಿವುಚಿದಂತಾಯಿತು. ಈ ಜನಕ್ಕೆ ಈ ಭವಣೆಯಿಂದ ಎಂದು ಮುಕ್ತಿ ಎನಿಸಿತು. ನಿಟ್ಟುಸಿರು ಬಿಟ್ಟು ಸುಮ್ಮನಾದೆ.

ಅದುವರೆಗಿನ ವೆಂಕಟಸುಬ್ಬಯ್ಯನವರ ಕಥೆಕೇಳಿ, ಆದರ ಕೊನೆಯನ್ನರಿಯಬೇಕೆಂಬ ಬಯಕೆ ಉರಿಯಾಗಿತ್ತು ನನ್ನ ಎದೆಯಲ್ಲಿ. ಆದರೆ ಯಾರಿಂದ ಅರಿಯುವುದು, ಯಾರು ಅದನ್ನು ನೆನಪಿಟ್ಟುಕೊಂಡು ಹೇಳ ಬಲ್ಲಂಥವರು? ಎಲ್ಲರೂ ತೊರೆಯೂರಿನಲ್ಲಿ ಅವರ ವಂಶದವರೊಬ್ಬರು ಇದಾರೆಂದು ಹೇಳಿದ್ದರು. ಮೊದಲು ಅಲ್ಲಿ ಪ್ರಯತ್ನ ಮಾಡಿ, ಅಲ್ಲಿ ಏನು ತಿಳಿಯುವುದೋ ಅರಿತುಕೊಂಡು, ನಂತರ ಬೇರೆಕಡೆ ಹುಡುಕುವುದು ಎಂದು ನಿರ್ಧಾರ ಮಾಡಿ, ಆ ದಿನ ಮಧ್ಯಾಹ್ನವೇ ಹಿರಿಯೂರಿಗೆ ಹೊರಟೆ. ಆ ಸಂಜೆ ಅಲ್ಲೇ ಆಯಿತು.

ತೊರೆಯೂರು ಹಿರಿಯೂರು ಧರ್ಮಪುರ ರಸ್ತೆಯಲ್ಲಿರುವ ಸಣ್ಣ ಹಳ್ಳಿ. ಅಲ್ಲಿಗೆ ಬಸ್ಸಿನ ಸಂಪರ್ಕವಿಲ್ಲ; ಕಾಲು ನಡಗೆಯಲ್ಲಿ ಸವೆಸಬಹುದಾದ ದೂರವಲ್ಲ, ಕುರುಮರಡಿಯಲ್ಲಾದ ಉಪವಾಸ ವನವಾಸ ಬುದ್ಧಿ ಕಲಿಸಿತ್ತು. ಆದುದರಿಂದ, ಅಲ್ಲಿಗೆ

ಹೋಗಲು ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು ಹಿರಿಯೂರಿನಲ್ಲಿರುವ ನೆಂಟರ ಗಾಡಿ ಕಟ್ಟಿಸಿಕೊಂಡು, ಬೆಳಗ್ಗೆ ಹತ್ತು ಗಂಟೆಯ ವೇಳೆಗೆ ತೊರೆಯೂರು ಸೇರಿದೆ.

ವೇದಾವತಿ ನದಿಯ ದಡದಲ್ಲಿದೆ ತೊರೆಯೂರು. ನದಿಯನ್ನು ಅತ್ತ ಕಡೆಯ ಜನ ತೊರೆ ಎನ್ನುತ್ತಾರೆ. ಅದರಿಂದಲೇ ಆ ಊರಿಗೆ ಆ ಹೆಸರು. ಒಂದು ಕಾಲಕ್ಕೆ ತೊರೆಯೂರು ಹೆಸರುವಾಸಿಯಾದ ಅಗ್ರಹಾರವಾಗಿತ್ತಂತೆ. ಈಗ ಅದು ಬಾಳೆಯನ್ನು ಬೆಳೆಯಲು ಬಂದ ಕೊಯಮತ್ತೂರಿನಕಡೆಯ ತಮಿಳು ಮಾತನಾಡುವ ಜನ ಊರ ತುಂಬಾ ಸೇರಿಕೊಂಡು ಅದು ಪುಟ್ಟ ಸೇಲಂ ಆಗಿದೆ. ಊರೂ ಹಿಂದೆ ಇದ್ದಿರಬಹುದಾದ ಸ್ಥಿತಿಯಲ್ಲಿಲ್ಲ. ಆಕಾರ ಕಳೆದುಕೊಂಡರೂ, ಹೆಸರು ಉಳಿಸಿಕೊಂಡವರಂತೆ ಇದೆ. ಊರಮಧ್ಯೆ ಸಣ್ಣದಾದರೂ. ಸುಂದರವಾದ ಒಂದು ಅಮ್ಮನವರ ಗುಡಿ ಇದೆ. ಆ ದೇವಾಲಯದ ಅರ್ಚಕರು ಶ್ರೀಕಂಠ ಶಾಸ್ತ್ರಿಗಳ ಮನೆಗೆ ಹೋಗಿ, ಹಿರಿಯೂರಿನ ನೆಂಟರಿಂದ ತಂದ ಪರಿಚಯ ಪತ್ರ ಒಪ್ಪಿಸಿದೆ.

ಶ್ರೀಕಂಠ ಶಾಸ್ತ್ರಿಗಳಿಗೆ ನಾನು ಅಲ್ಲಿಗೆ ಬಂದ ಕಾರಣವನ್ನರಿತು ಸಂತೋಷವಾಯಿತು.

'ಈ ಕಾಲದ ಜನ ಹಿಂದಿನವರ ವಿಷಯ ತಿಳಿದುಕೊಳ್ಳಲು ಇಷ್ಟು ಮುತವರ್ಜಿ ವಹಿಸುವುದು ತುಂಬಾ ಅಪರೂಪ. ನನ್ನಿಂದ ಆದಷ್ಟು ನಿರ್ವಂಚನೆಯಾಗಿ ಮಾಡುತ್ತೇನೆ. ತಿಳಿದಷ್ಟನ್ನು ಹೇಳುತ್ತೇನೆ. ಆದರೆ ತಾವು ಒಂದು ಕೆಲಸಮಾಡಬೇಕು.'

'ಏನು ಹೇಳಿ?'

'ಗೋವಿಂದಯ್ಯನವರ ಮನೆಗೆ ನೀವೇ ಹೋಗಿ, ವಿಷಯ ಸಂಗ್ರಹ ಮಾಡಿಕೊಳ್ಳಬೇಕು. ಆ ಕೆಲಸದಲ್ಲಿ ಮಾತ್ರ ನನ್ನಿಂದೇನೂ ಸಹಾಯವಾಗದು'

'ಗೋವಿಂದಯ್ಯ ಯಾರು?'

'ಅವರೇ ವೆಂಕಟಸುಬ್ಬಯ್ಯನೋರ ವಂಶದವರು. ನಮಗೂ ಅವರಿಗೂ ಅಷ್ಟಕ್ಕಷ್ಟೆ, ನಮ್ಮ ಮುಖ ಕಂಡರೆ ಅವರಿಗೆ ಆಗೋಲ್ಲ.'

'ಏಕೆ?'

'ನೀವು ಅಮ್ಮನೊರ ಗುಡಿ ನೋಡಿದರಲ್ಲಾ, ಅದು ವೆಂಕಟಸುಬ್ಬಯ್ಯನವರು ಕಟ್ಟಿಸಿದ್ದು. ಆ ಕಾಲದಿಂದ ಪೂಜಾಧಿಕಾರ ನಮಗೆ ಸೇರಿದೆ. ಅದಕ್ಕಾಗಿ ನಮಗಷ್ಟು ಜಮೀನು ಬಿಟ್ಟಿದ್ದರು ವೆಂಕಟಸುಬ್ಬಯ್ಯನವರು. ಇದ್ದದ್ದನ್ನೆಲ್ಲಾ ಮಾರಿಕೊಂಡು, ಇವರು ದೇವಾಲಯದ ಜಮೀನಿನ ಮೇಲೂ ಅಧಿಕಾರ ಸ್ಥಾಪಿಸಲು ಯತ್ನಿಸಿದರು. ಅದು ಕೇಸಾಗಿ, ನಮ್ಮಂತೆ ತೀರ್ಮಾನವಾಯ್ತು. ಆ ಕಾಲದಿಂದ ನಮಗೂ ಅವರಿಗೂ ಎಣ್ಣೇ ಸೀಗೇಕಾಯಿ. ಆದ್ದರಿಂದ ಅವರನ್ನು ನೀವೇ ನೋಡಿಕೊಂಡು ಬನ್ನಿ, ನಾನು ಕಳಿಸಿದೆ ಅಂತ ಕೂಡಾ ಹೇಳಬೇಡಿ.' ಎಂದರು.

'ಹಾಗೇ ಆಗಲೆಂದು ಹೇಳಿ ನಾನು, ಸ್ನಾನ ಮುಗಿಸಿ ಗೋವಿಂದಯ್ಯನವರ ಮನೆಗೆ ಹೋದ. ಅವರನ್ನು ನೋಡಿದಾಗಲೇ ನನಗೆ ಅವರನ್ನು ಮಾತನಾಡಿಸಲು ಬೇಸರವಾಯಿತು. ಬ್ರಾಹ್ಮಣರಾದರೂ, ಬ್ರಾಹ್ಮಣ ಲಕ್ಷಣ ಕೊಂಚವಾದರೂ ಇರಲಿಲ್ಲ. ಆ ಬಟ್ಟೆಯೋ, ಆಕಾರವೋ—ಎಂಥವರ ವಂಶದಲ್ಲಿ ಹುಟ್ಟಿದವರು ಹೇಗಿದಾರೆ ಎಂದು ವ್ಯಥೆಯಾಯಿತು. ಆದರೆ ಕಾರ್ಯವಾಸಿ ಕತ್ತೆ ಕಾಲು ಕಟ್ಟು ಎನ್ನುತ್ತಾರೆ. ನನ್ನ ಪರಿಸ್ಥಿತಿ ಹಾಗೇ ಇತ್ತು. ನಮಸ್ಕಾರ ಹೇಳಿ, ನಾನು ಬಂದ ಕಾರಣವನ್ನು ವಿವರಿಸಿದೆ. ಆ ಮಾತು ಕೇಳಿದ ಕೂಡಲೇ ಆತ ಕೆಣಕಿದ ಶ್ವಾನದಂತೆ ಗುರ್ರೆನ್ನುತ್ತ ಮೇಲೆ ಬೀಳಲೇ ಬಂದ.

'ಸುಳ್ಯಾಕ್ರಿ ಹೇಳ್ತೀರಾ ಶ್ರೀಕಂಠನ ಮನೆ ಹತ್ರ ನಮ್ಮ ಹುಡುಗಿ ನಿಮ್ಮನ್ನು ನೋಡಿದಳಂತೆ. ವೆಂಕಟಸುಬ್ಬಯ್ಯನೋರ ಆಸ್ತಿ ಅನುಭವಿಸೋಕೆ ಅವನು, ಅವರ ಕಥೆ ಹೇಳೋಕೆ, ಪುಗಸಟ್ಟೆ ಪುರಾಣ ಓದೋಕೆ ನಾನೋ? ಅವರನ್ನೇ ಕೇಳ್ರಿ.'

'ಸ್ವಾಮಿ, ತಾವು ಸಿಟ್ಟಾಗ ಬಾರದು. ತಮತಮಗೆ ಮನಸ್ತಾಪವಿರಬಹುದು. ಆದರೆ ನಾನು ಏನೂ ತಿಳಿಯದವನು. ಅಷ್ಟು ದೂರದಿಂದ ವೆಂಕಟಸುಬ್ಬಯ್ಯನೋರ ವಿಷಯ ತಿಳಿದುಕೋಬೇಕೂಂತ ಬಂದಿದೀನಿ. ವಿಶ್ವಾಸವಿಟ್ಟು ಹೇಳಬೇಕು'

'ಹೇಳಬೇಕು, ನಿಜ, ಆದರೆ ತಮಗೆ ಅದರಲ್ಲೇನು ಫಾಯಿದೆ?' ಆತನ ಮಾತು ಕೇಳಿ ನನಗೆ ಆಶ್ಚರ್ಯವಾಯಿತು.

'ನನಗೆ ಇದರಲ್ಲೇನೂ ಲಾಭವಿಲ್ಲ. ತಮ್ಮಿಂದ ಕಥೆ ಕೇಳಿ ಲಾಭ ಮಾಡಿಕೊಳ್ಳುವ ದುರುದ್ದೇಶದಿಂದ ಬಂದವನಲ್ಲ ನಾನು. ಅವರ ವಿಚಾರ ಅಲ್ಲಲ್ಲಿ ಕೇಳಿದೆ. ಅವರ ಮೇಲೆ ಭಕ್ತಿ ಹುಟ್ಟಿತು. ಆದ್ದರಿಂದ ತಮಗೇನಾದರೂ ಗೊತ್ತಿದ್ದರೆ ತಿಳಿದುಕೊಳ್ಳಬೇಕು, ಅವರ ವಂಶದವರಾದ ನಿಮ್ಮನ್ನು ಕಂಡು ಹೋಗಬೇಕು ಎಂತ ಬಂದೆ. ಅಷ್ಟೇ.'

'ಅದೆಲ್ಲಾ ನಂಬೋರು ಯಾರ್ರೀ. ನನಗೇ ಮಂಕುಬೂದಿ ಹಾಕೋಕೆ ಬರಬ್ಯಾಡ್ರಿ. ಏನೋ ಇದೆ. ಬಂದಿದೀರ. ನಿಮಗೆ ಬರೋದನ್ನೆಲ್ಲಾ ನನಗೆ ಕೊಡಿ ಅಂತ ಕೇಳ್ತೋಲ್ಲ. ನನಗೂ ಅಷ್ಟು ಕೊಟ್ಟರೆ ಹೇಳುತ್ತೇನೆ. ಇಲ್ಲವಾದರೆ ನನ್ನ ದಾರಿ ನನಗೆ, ನಿಮ್ಮ ದಾರಿ ನಿಮಗೆ. ವೆಂಕಟಸುಬ್ಬಯ್ಯನೋರು ನಾಲಿಗೆ ಕತ್ತರಸಿಕೊಂಡದ್ದೇಕೆ ಅಂತ ಶ್ರೀಕಂಠನಿಗಲ್ಲ, ಅವರಪ್ಪನಿಗೂ ಗೊತ್ತಿಲ್ಲ. ಬೇಕಾದರೆ ಹೇಳಿ.'

'ವಿಚಾರ ನಿಮಗೊಬ್ಬರಿಗೇನೇ ಗೊತ್ತಿರೋದು.'

'ಹೌದು. ಅದಿದ್ದ ಕಾಗದ ಪತ್ರ ಎಲ್ಲಾ ನಮ್ಮಪ್ಪನ ಕಾಲಕ್ಕೇ ಬೆಂಕಿ ಪಾಲಾಗಿ ಹೋಯ್ತು. ಏನು ಹೇಳ್ತೀರ ಹೇಳಿ, ಸುಮ್ಮನೆ ಉಸಿರು ದಂಡ ಮಾಡಿಬೇಡಿ.'

ಅತನ ಕೈಲಿ ಮಾತಾಡಿ ಉಪಯೋಗವಿಲ್ಲವೆನಿಸಿತು. ಜೇಬಿನಲ್ಲಿದ್ದ ಹಣದಲ್ಲಿ ಐದು ರುಪಾಯಿ ನೋಟು ಆತನ ಮುಂದಿಟ್ಟು—'ನಿಮಗೆ ಗೊತ್ತಿರೋದನ್ನ ಹೇಳಿ ಉದ್ಧಾರ ಮಾಡಬೇಕು? ಎಂದೆ. ಆತ ನೋಟನ್ನೇ ನಂಬದವನಂತೆ ಹತ್ತಾರು ಸಲ ಹಾಗೆ,

ಹೀಗೆ ತಿರುಗಿಸಿ ನೋಡಿ, ಸೊಂಟಕ್ಕೆ ಸಿಗಿಸಿಕೊಂಡು, ಬಾಳೆಪಟ್ಟೆಯಲ್ಲಿದ್ದ ನಶ್ಯ ಮೂಗಿಗೆ ಏರಿಸಿ, ವೆಂಕಟಸುಬ್ಬಯ್ಯನವರು ನಾಲಗೆ ಕತ್ತರಿಸಿಕೊಂಡ ವಿಚಾರ ಹೇಳ ತೊಡಗಿದರು.

೧೭

'ವೆಂಕಟಸುಬ್ಬಯ್ಯನೋರು ನಾಲಿಗೆ ಕತ್ತರಿಸಿಕೊಂಡಾಗ, ಅವರಿಗೆ ಅರವತ್ತರಮೇಲೆ ವಯಸ್ಸಾಗಿತ್ತು. ಆ ವಯಸ್ಸಿನಲ್ಲೂ ಭೈರವಿ ವೆಂಕಟಸುಬ್ಬಯ್ಯಾಂದರೆ, ಅವರ ಹಾಗೆ ಹಾಡೋ ಯೋಗ್ಯತೆ ಇದ್ದವರೇ ಇರಲಿಲ್ಲವಂತೆ. ದೇಶ ದೇಶಾಂತರದಿಂದ ಜನ, ಅವರ ಹೆಸರು ಕೇಳಿ, ದುರ್ಗಕ್ಕೆ ಬಂದು ಅವರ ಹಾಡು ಕೇಳಿ ಸಂತೋಷಪಟ್ಟು ಹೋಗುತ್ತಿದ್ದರಂತೆ. ಯಾರು ಬರಲಿ, ಬೇಕಾದವರು ಕೇಳಬೇಕೆನ್ನಲಿ, ಶುಕ್ರವಾರ, ಮಂಗಳವಾರ ಅಮ್ಮನವರ ಗುಡೀಲಿ ಕೇಳಬೇಕು. ಇಲ್ಲದೆ ಹೋದರೆ ಅವರ ಮನೇಲಿ ಕೇಳಬೇಕು, ಅದೂ ಸಂಜೆ ಪೂಜೆ ಹೊತ್ತಿನಲ್ಲಿ. ಭೈರವಿ ಕೇಳಬೇಕೆಂದರೆ ಬೆಳಗಿನಜಾವದವರೆಗೂ ಎದ್ದು ಕುಳಿತಿರಬೇಕು. ಪಾಳೆಯಗಾರರಿಗೂ, ಅವರಿಗೂ ಏಕೋ ಮನಸ್ತಾಪವಾಗಿ, ಅರಮನೆಯಲ್ಲಿ ಕೂಡಾ ಅವರು ಹಾಡುತ್ತಿರಲಿಲ್ಲವಂತೆ. ಬೇರೆಯವರ ಹಾಗೇ ಪಾಳಯಗಾರರೂ ಬಂದು ಕೇಳಿಕೊಂಡು ಹೋಗುತ್ತಿದ್ದರಂತೆ.

'ಹೀಗಿರುವಾಗ ದುರ್ಗಕ್ಕೇ ವಿಪತ್ತು ಬಂತು. ಪಟ್ಟಣದ ಹೈದರಾಲೀಗೆ ಚಿತ್ರದುರ್ಗದ ಕೋಟೇ ಮೇಲೆ ಮೊದಲಿನಿಂದಲೂ ಕಣ್ಣು. ಅದನ್ನು ವಶಸಡಿಸಿಕೊಳ್ಳ ಬೇಕೆಂದು ಏನೇನೋ ಪ್ರಯತ್ನ ಪಟ್ಟ. ಲಡಾಯಿಗೆ ಕೋಟೆಯಿರಲಿ, ಕೋಟೆಯ ಕಲ್ಲು ಕೂಡಾ ಅಲುಗುವ ಹಾಗಿರಲಿಲ್ಲ. ನಾಲ್ಕೈದು ಬಾರಿ ಪ್ರಯತ್ನಪಟ್ಟು ವಿಫಲವಾಗಿದ್ದ. ಕೊನೆಗೆ, ಕೋಟೆಯನ್ನು ಗೆಲ್ಲಲು ಬೇರಾನ ದಾರಿಯೂ ಇಲ್ಲದೆ, ದುರ್ಗದ ಒಳಗಿದ್ದ ಮುಸಲ್ಮಾನರೊಂದಿಗೆ ಪಿತೂರಿ ಮಾಡಿದ. ಅವರ ದ್ರೋಹದಿಂದ ಕೋಟೆ ಬಿತ್ತು. ಕಡೆಗೆಪಾಳೆಯಗಾರ ಮದಕರಿನಾಯಕರು, ಕೋಟೆ ಉಳಿಯುವುದಿಲ್ಲವೆಂದು ತಿಳಿದಾಗ

ರಾಣೀವಾಸದ ಹೆಂಗಸರನ್ನೆಲ್ಲಾ ಕೈಯಾರೆ ಕತ್ತರಿಸಿ, ತಾವು ಲಡಾಯಿ ಮಾಡುತ್ತಾ ಸತ್ತರು. ಚಿತ್ರದುರ್ಗದ ಕಥೆ ಮುಗಿದುಹೋಯಿತು.

'ಕೋಟೆ ಬಿದ್ದ ಮೇಲೆ ಹೈದರನ ಮಗ ಟೀಪೂ ಸುಲ್ತಾನ ಕೆಲವು ದಿನ ದುರ್ಗದಲ್ಲೇ ಇದ್ದು ಅಧಿಕಾರ ನೋಡುತ್ತಿದ್ದ. ಆಗ ನಡೆದದ್ದು ಇದು.

'ದೇಶ ದೇಶಾಂತರ ವ್ಯಾಪಿಸಿದ, ವೆಂಕಟಸುಬ್ಬಯ್ಯನವರ ಹಾಡುಗಾರಿಕೆಯ ಕೀರ್ತಿ ಟೀಪುವಿನ ಜನಾನಾಕ್ಕೂ ತಿಳಿದಿತ್ತು. ಒಂದು ದಿನ ಸುಲ್ತಾನರ ಬೇಗಂ—

'ದುರ್ಗದ ವೆಂಕಟಸುಬ್ಬಯ್ಯನವರ ಹೆಸರು ತುಂಬಾ ಕೇಳಿದೇವೆ. ಭೈರವಿರಾಗ ಅವರ ಹಾಗೆ ಯಾರೂ ಹಾಡುವುದಿಲ್ಲವಂತೆ. ಕೇಳ ಬೇಕಾಗಿತ್ತು' ಎಂದರು, ಕೇಳಬೇಕೋ ಬೇಡವೋ ಎಂದು ಸಂಕೋಚ ಪಡುತ್ತಾ.

'ಅದೇನು ದೊಡ್ಡದು. ಅದನ್ನು ಕೇಳಲು ಸಂಕೋಚ ಪಡಬೇಕೇ. ಆಗಲಿ. ಏರ್ಪಾಟು ಮಾಡಿದರಾಯಿತು. ಇವೊತ್ತೆ ಭಕ್ಷಿಯವರಿಗೆ ಹೇಳುತ್ತೇನೆ' ಎಂದರು ಚಿಕ್ಕ ನವಾಬರು.

'ಅವರು ದೇವಸ್ಥಾನದಲ್ಲಲ್ಲದೆ ಬೇರೆಲ್ಲೂ ಹಾಡುವುದಿಲ್ಲವಂತೆ— ಹಾಗೆಂತ ಕೇಳಿದೀವಿ.'

'ಅದೆಲ್ಲಾ ಬಡಾಯಿ. ನಾವೇ ಕೇಳಿದರೆ ಇಲ್ಲ ಎನ್ನುವ ಧೈರ್ಯ ಯಾರಿಗೆ? ನಿನ್ನ ಮನಸಿನ ಪ್ರೀತಿ ತೀರಿಸುತ್ತೇನೆ.' ಎಂದು ಮಾತು ಕೊಟ್ಟರು.

'ಅದರಂತೆ ಮರುದಿನ ಪ್ರಾತಃಕಾಲವೇ ಭಕ್ಷಿಯವರಿಗೆ ಹೇಳಿದರು- 'ವೆಂಕಟಸುಬ್ಬಯ್ಯನವರನ್ನು ಕರೆಸಿ' ಎಂತ. ಆ ದಿನವೇ ಬೆಳ್ಳಿ ಕಟ್ಟಿಗೆಯ ಆಳು ಬಂದು, ವೆಂಕಟಸುಬ್ಬಯ್ಯನವರಿಗೆ ಅವರ ಅಪ್ಪಣೆಯನ್ನು ತಿಳಿಸಿದ. ಅದರಂತೇ ವೆಂಕಟಸುಬ್ಬಯ್ಯನವರು ಟೀಪುವನ್ನು ನೋಡಲು ಹೊರಟರು.

’ಎಲ್ಲರಿಗೂ ತಾನೀಗ ದುರ್ಗದ ದೊರೆ ಎಂದು ತೋರಿಸುವ ಚಪಲ. ಹಿಂದಿನ ಪಾಳಯಗಾರರು ನವರಾತ್ರಿ ಓಲಗ ನಡೆಸುತ್ತಿದ್ದ ಬಣ್ಣದ ಚಾವಡಿಯಲ್ಲಿ ಟೀಪು ಪ್ರತಿದಿನವೂ ಓಲಗನಡೆಸುತ್ತಿದ್ದ. ಯಾರನ್ನು ನೋಡ ಬೇಕಾದರೂ ಅಲ್ಲೇ. ವೆಂಕಟಸುಬ್ಬಯ್ಯನವರೂ ಟೀಪುವನ್ನು ನೋಡಿದರು. ಟೀಪುವನ್ನು ಕಾಣುವರು ಮೂರು ಮೂರು ಬಾರಿ ಕುರ್ನಿಸಾತ್ ಮಾಡಿ, ನಜರ್ ಒಪ್ಪಿಸಿ, ಭಕ್ಷಿಯವರ ಮೂಲಕ ಮಾತಾಡಿಸಬೇಕಾಗಿತ್ತು. ಆದರೆ ವೆಂಕಟಸುಬ್ಬಯ್ಯನವರು ಅದಾವುದನ್ನೂ ಮಾಡಲಿಲ್ಲ. ಕಟ್ಟಿಗೆಯವರ ಕೈಲಿ ಬಂದಿರುವ ಸುದ್ದಿ ತಿಳಿಸಿ, ಕರೆಸಿದಾಗ ಒಳಗೆ ಹೋದರು. ತನ್ನಸಭಾ ಮರ್ಯಾದೆಯನ್ನು ಭಂಗಮಾಡಿದ್ದಕ್ಕಾಗಿ, ಟೀಪುವಿಗೆ ಮೊದಲೇ ಅವರ ಮೇಲೆ ಸಿಟ್ಟು ಬಂತು. ಮುಖ ಬಿಗಿಯಿತು. ಕುಡಿಮೀಸೆಯನ್ನು ಕಡಿಯುತ್ತಾ—

’ಭಕ್ಷಿಗಳೇ, ದುರ್ಗದ ನವಾಬರ ಇಚ್ಛೆಯನ್ನು ಅವರಿಗೆ ತಿಳಿಸಿ. ಹಾಗೇ ನಮ್ಮದು ಕಾಡು ಕುರುಬರ ಚಾವಡಿಯಲ್ಲ, ನವಾಬರ ಓಲಗ ಎಂದು ಹೇಳಿ’ ಎಂದ. ಮುಳ್ಳಿನಂತಿತ್ತು ಒಗರಿನಿಂದ ಆಡಿದ ಆ ಮಾತು. ಆ ಮಾತು ಕೇಳಿ ವೆಂಕಟಸುಬ್ಬಯ್ಯನವರ ಮೈ ಸೆಟೆದಿತು.

’ಮೂರ್ಖರಿಗೆ ಹೇಳುವಂತೆ ಹೇಳಲಾಗುತ್ತಿದೆ. ಸಭಾ ಮರ್ಯಾದೆ ಕಲಿಸಲೆಂದು ಕರೆಸಿದ್ದರೆ, ನಮಗೆ ವೇಳೆಯಿಲ್ಲವೆಂದು ನವಾಬರಿಗೆ ತಿಳಿಸಿ’ ಎಂದರು ವೆಂಕಟಸುಬ್ಬಯ್ಯ. ಭಕ್ಷಿ ಇಬ್ಬರ ಮಾತನ್ನು ಕೇಳಿ ಗಾಬರಿಯಾದ. ಪಿಸುಧನಿಯಲ್ಲಿ ’ನವಾಬರನ್ನು ರೇಗಿಸ ಬೇಡಿ. ಮರ್ಯಾದೆಯಿಂದ ನಡೆದು ಕೊಳ್ಳಿ’ ಎಂದ ವೆಂಕಟಸುಬ್ಬಯ್ಯನವರಿಗೆ. ಅವರ ಮಾತು ಕೇಳಿ ನಸುನಗುತ್ತಾ ವೆಂಕಟಸುಬ್ಬಯ್ಯನವರು ಹೇಳಿದರು—

’ನಿಮ್ಮ ನವಾಬರಿಗೆ ತಾವು ದುರ್ಗದ ದೊರೆಗಳೆಂಬುದನ್ನು ನಮಗೆ ತೋರಿಸಬೇಕು, ನಮ್ಮಿಂದ ಆ ಮರ್ಯಾದೆ ಪಡೆಯಬೇಕೆಂಬ ಚಪಲ. ಆದರೆ ಅದು ಸಾಧ್ಯವಿಲ್ಲ. ನಾವು ಒಬ್ಬದೇವರು, ಒಬ್ಬ ದೊರೆಗೆ ತಲೆ ಬಾಗುವುದನ್ನು ಕಲಿತ ಜನ.

ಇದ್ದರೂ ಅಷ್ಟೆ, ಸತ್ತರೂ ಅಷ್ಟೆ, ದ್ರೋಹದಿಂದ ಪಡೆದ ದೌಲತ್ತನ್ನು ಮೆರೆಸಲು ಇಷ್ಟು ಚಪಲವಿರಬಾರದು. ದ್ರೋಹದಿಂದ ಬಂದ ರಾಜ್ಯ, ದ್ರೋಹದಿಂದಲೇ ಹೋಗಬಹುದು. ಈ ಮಾತು ನವಾಬರಿಗೆ ನೆನಪು ಮಾಡಿಕೊಡಿ.'

'ಮಾತು ಕೇಳಿ ಮುಂಗೋಪದ ಸ್ವಭಾವ ಟೀಪುವಿಗೆ ಮೈಯುರಿಯಿತು. ಆದರೆ ಹೆಂಡತಿಗೆ ಕೊಟ್ಟ ಮಾತು ನೆನಪಾಗಿ, ಅವರ ಮಾತು ಕೇಳಿಸದವರಂತೆ ತಾನೇ ನೇರವಾಗಿ ಅವರಿಗೆ ಹೇಳಿದ-

'ಮಾತಾಡಲು, ಮರ್ಯಾದೆ, ವಿನಯ ಕಲಿಯಲು ನಿಮ್ಮನ್ನು ಕರೆಸಿಲ್ಲ ವೆಂಕಟಸುಬ್ಬಯ್ಯ. ನಮ್ಮ ಜನಾನಾ ನಿಮ್ಮ ಹಾಡು ಕೇಳ ಬಯಸಿದೆ. ಆ ವಿಷಯ ತಿಳಿಸಲು ಕರೆಸಿದೆ. ಎಂದು ಹಾಡುವಿರೆಂದು ತಿಳಿಸಿದರೆ, ಭಕ್ಷಿಯವರು ಮುಂದಿನ ಏರ್ಪಾಟು ಮಾಡುತ್ತಾರೆ.'

'ತಮ್ಮ ರಾಣೀವಾಸದವರಿಗೆ ನಮ್ಮ ಸಂಗೀತದ ಮೇಲೆ ಪ್ರೀತಿಯುಂಟಾದುದು ನಮ್ಮ ಭಾಗ್ಯ. ಎಂದು ಬಡವರ ಮನೆಗೆ ದಯಮಾಡಿಸುವಿರೆಂದು ತಿಳಿಸಿದರೆ ಮುಂದಿನ ಏರ್ಪಾಟು ಮಾಡುತ್ತೇನೆ.'

'ನಮ್ಮ ಅರಮನೆಯಲ್ಲೇ ತಮ್ಮ ಸಂಗೀತವಾಗಬೇಕು'

'ಅದು ಸಾಧ್ಯವಿಲ್ಲದ ಮಾತು'

'ಯಾವುದು ಸಾಧ್ಯವಿಲ್ಲ? ಏಕೆ ಸಾಧ್ಯವಿಲ್ಲ?'

'ತಾವು ಹೇಳಿದುದು ಆಗದ ಮಾತು?'

'ಯಾವುದು-ತಾವು ಹಾಡುವುದೇ. ನಾವು ಕೇಳುವುದೇ? ನಿಮ್ಮ ಹಾಡುಗಾರಿಕೆ ಜನಾನಾಕ್ಕೆ ಯೋಗ್ಯವಾದುದಲ್ಲವೆಂಬ ಸಂದೇಹವಿದ್ದರೆ, ತಿಳಿಸಬಹುದು.'

’ನಮ್ಮ ಯೋಗ್ಯತೆಯ ವಿಷಯದಲ್ಲಿ ನಮಗೆ ಸಂದೇಹವಿಲ್ಲ. ತಮ್ಮ ಯೋಗ್ಯತೆಯ ವಿಷಯ ತಾವು ಆಡಬಹುದು. ನನ್ನ ಮಾತಿನ ಅರ್ಥ ಇಷ್ಟೆ-ನವಾಬರ ಅಂತಃಪುರದಲ್ಲಿ ನಾವು ಹಾಡುವುದು ಸಾಧ್ಯವಿಲ್ಲ’

’ನಮ್ಮ ಅಪೇಕ್ಷೆ, ಅಪ್ಪಣೆ ಎರಡಕ್ಕೂ ಒಂದೇ ಅರ್ಥ, ಬಲ್ಲಿರಾ?’

’ಬಲ್ಲೆ.’

’ಆದರೂ ಇಲ್ಲವೆನ್ನುತ್ತೀರಾ?’

’ಅಹುದು.’

’ಇದು ಉದ್ಧಟತನ. ನಮ್ಮ ಅಪ್ಪಣೆ ಪಾಲಿಸದವರಿಗೆ ಉಳಿಗಾಲವಿಲ್ಲ.’

’ನವಾಬರು ಸಿಟ್ಟಾಗಬಾರದು. ಒಂದು ಮಾತು ಹೇಳುತ್ತೇನೆ. ಸಹನೆಯಿಂದ ಕೇಳಬೇಕು. ನವಾಬರು ನನ್ನಂಥ ನೂರಾರು ಜನರ ಸಂಗೀತ ಕೇಳಿರಬಹುದು. ಅವರೆಲ್ಲರೂ ತಮ್ಮ ಇಛ್ಛಾನುಸಾರವಾಗಿ ವರ್ತಿಸಿರಬಹುದು, ನಿಮ್ಮ ಇಚ್ಛೆಗೆ ಅನುಸಾರವಾಗಿ ನಡೆಯದವರಿಗೆ ಉಳಿಗಾಲವಿಲ್ಲವೆಂದಿರಿ. ಆ ಮಾತೂ ನಿಜ. ದುರದೃಷ್ಟವಶದಿಂದ ಈ ಮೈ ನಿಮ್ಮ ಅಧೀನವಾಗಿದೆ. ಆದರೆ ನನ್ನ ವಿದ್ಯೆ ಯಾರ ಪ್ರಜೆಯೂ ಅಲ್ಲ, ಯಾರ ಆಳೂ ಅಲ್ಲ. ಅದು ನನ್ನ ದೇವರಿಗೆ ಮೀಸಲು. ನವಾಬರ ದೃಷ್ಟಿಯಲ್ಲಿ ನಮ್ಮಂಥ ಸಾಮಾನ್ಯ ಜನರ ವಿದ್ಯೆ, ನವಾಬರು ಬಯಸಿದಾಗ, ಬಯಸಿದಲ್ಲಿಗೆ ತಮ್ಮ ಭೋಗಕ್ಕೆ ಬರುವ ಬೆಲೆವೆಣ್ಣು ಎಂದಿರಬಹುದು. ಆದರೆ ನಮ್ಮ ದೃಷ್ಟಿಯಲ್ಲಲ್ಲ. ಅದು ನನ್ನ ತಾಯಿ, ದೇವರು. ಅಲ್ಲಾನ ದರ್ಶನಕ್ಕೆ ನವಾಬರು ಮಸಿದಿಗೇ ಹೋಗಬೇಕಾದಂತೆ, ನನ್ನ ತಾಯಿಯ ದರ್ಶನಕ್ಕೆ ಆಕೆಯ ಮಂದಿರಕ್ಕೇ ಭಕ್ತರಾಗಿ ಬರಬೇಕು. ಅದು ವಿನಾ, ನವಾಬರು ಬೆದರಿಸುವುದಿರಲಿ, ಸಾರ್ವಭೌಮ ಪದವಿ ಕೊಡುತ್ತೇನೆಂದರೂ, ನಿಮ್ಮ ಭೋಗ ತೃಪ್ತಿಯ ಪಾಪಪಂಕವಾದ ಜನಾನಾದಲ್ಲಿ ನನ್ನ

ತಾಯಿಯ ನರ್ತನ ಏರ್ಪಡಿಸಲಾರೆ. ಹಾಗೆ ನಾನು ಮಾಡುವುದಿರಲಿ, ನೀವು ಕೇಳುವುದೂ ಅಪಮಾನ.'

'ಟೀಪು ಮೊದಲೇ ಬೆಂಕಿ ನವಾಬ. ವೆಂಕಟಸುಬ್ಬಯ್ಯನವರ ಮಾತು ಕೇಳಿ ಉರಿಯುವ ಬೆಂಕಿಗೆ ಗಾಳಿ ಬೀಸಿದಂತಾಯಿತು. ಕ್ರೋಧದಿಂದ ನಿಶಿತವಾದ ಧ್ವನಿಯಲ್ಲಿ ಹೇಳಿದ.

'ನಿಮ್ಮ ಮಾತು ನಮಗೆ, ನಮ್ಮ ನವಾಬಗಿರಿಗೇ ಅಪಮಾನ. ಈ ಮಾತಾಡಿದವರ ನಾಲಿಗೆ ಸೀಳಿಸಬಲ್ಲ ಶಕ್ತಿ ನಮಗಿದೆ.'

'ನವಾಬರ ಶಕ್ತಿಯನ್ನು ನಾನು ಬಲ್ಲೆ. ಇಲ್ಲವೆಂದವರನ್ನು ಕೊಲ್ಲುತ್ತೀರ. ಅಷ್ಟಕ್ಕಿಂತ ಹೆಚ್ಚೇನೂ ಆಗದು, ತಮ್ಮಿಂದ.'

'ಈಗಲೂ ಹೇಳುತ್ತೇನೆ ಕೇಳಿ. ಈ ಛಲ ಬೇಡ.'

'ನಾನು ಅನುಗ್ರಹಕ್ಕೆ ಸೋಲದೆ, ಆಗ್ರಹಕ್ಕೆ ಬೆದರುವ ಹೇಡಿ ಎಂದು ನನ್ನನ್ನು ಭಾವಿಸಿರುವಂತಿದೆ. ಸಂಗೀತದ ವಿಷಯದಲ್ಲಿ ನನಗೆ ಎರಡು ನಾಲಗೆಯಿಲ್ಲ. ನವಾಬರು ಇಚ್ಛೆಯಿದ್ದಂತೆ ನಡೆಯಬಹುದು'

'ನಾಳೆ ಈ ವೇಳೆಯವರೆಗೂ ತಮಗೆ ಅವಕಾಶಕೊಟ್ಟಿದೇನೆ. ಮನಸ್ಸು ಬದಲಾಯಿಸಿದರೆ ಸರಿ. ಇಲ್ಲವಾದರೆ, ನಾಲಿಗೆ ಸೀಳಿಸಿ ಮತ್ತೆ ಹಾಡದಂತೆ ಮಾಡುತ್ತೇವೆ. ಇದು ನಮ್ಮ ಆಜ್ಞೆ ಭಕ್ಷಿಗಳೇ. ಅದನ್ನು ಜಾರಿ ಮಾಡಲು ಸಿದ್ಧತೆ ಮಾಡಿ.'

'ನನಗೇನೂ ಅವಕಾಶ ಬೇಡ; ನವಾಬರು ತಮಗೆ ಬೇಕಾದರೆ ಅವಕಾಶ ತೆಗೆದುಕೊಳ್ಳಬಹುದು. ಆಯಿತು. ನಾನು ಬರಲೇ?' ಎಂದು ಹೇಳಿ ವೆಂಕಟಸುಬ್ಬಯ್ಯ ಟೀಪುವಿನತ್ತ ಬೆನ್ನು ಮಾಡಿ, ಹೊರಬಂದರು. ಟೀಪು ಕೆಣಕಿದ ಸರ್ಪವಾದ.

'ಮಧ್ಯಾಹ್ನದ ವೇಳೆಗೆ ಈ ಸುದ್ದಿ ಕಿವಿಯಿಂದ ಕಿವಿ, ಬಾಯಿಂದ ಬಾಯಿಗೆ ದಾಟಿ ಊರೆಲ್ಲಾ ಹರಡಿತು. ಜನ ಗುಂಪುಗುಂಪಾಗಿ ಬಂದು ವೆಂಕಟಸುಬ್ಬಯ್ಯನವರನ್ನು ಕಂಡು ಹೋದರು. ಎಲ್ಲರಿಗೂ ಗಾಬರಿ, ತಹತಹ. ಆದರೆ ಯಾರು ಏನು ಹೇಳಬೇಕು? ಅವರಲ್ಲಿ ಕೊಂಚ ಸಲಿಗೆಯಿಂದ ಮಾತಾಡುತ್ತಿದ್ದ ಆವರ ಹಾಡಿಗೆ ಮದ್ದಲೆ ನುಡಿಸುವ ದಾಸಪ್ಪ, ಆ ಸುದ್ದಿ ಕೇಳಿ ಅಳುತ್ತಲೇ ಬಂದ.

'ಏನು ಯಜಮಾನ್ರೇ, ಹೀಗಾಗ್ಹೋಯ್ತು.' ಎಂದ.

'ಏನೂ ಆಗಲಿಲ್ಲ ದಾಸಪ್ಪ. ತಾಯಿ ನನ್ನ ಶಕ್ತಿ ಪರೀಕ್ಷೆ ಮಾಡಲಿಕ್ಕೆ ಬಂದಿದಾಳೆ.'

'ಈ ನವಾಬನಿಗಿಷ್ಟು ಬೆಂಕಿ ಬೀಳ. ನಿಮ್ಮ ಮೇಲಾ ದೌಲತ್ತು ತೋರಿಸೋದು.'

'ಆತನದೇನೂ ತಪ್ಪಿಲ್ಲ ದಾಸಪ್ಪ, ತಾಯಿ ಆತನ ಬಾಯಲ್ಲಿ ಆ ಮಾತಾಡಿಸಿದಳು'

'ಎಲ್ಲಿ ತಾಯಿ, ಬಿಡಿ ಯಜಮಾನರೇ, ತುರುಕ ಬುದ್ಧಿ.'

'ಛಿ! ಆ ಮಾತಾಡಬಾರದು. ಜಾತಿಗೂ ಅದಕ್ಕೂ ಏನು ಸಂಬಂಧ. ಮನುಷ್ಯನ ಸಣ್ಣತನಕ್ಕೆ ಜಾತಿ ಏನು ಮೂಡುತ್ತದೆ. ಪರೀಕ್ಷೆಗೆ ಬಂದಿದೆ. ನಡೆದುಹೋಗಲಿ.'

'ಹಾಗಂದಾರುಂಟಾ. ಇದು ಬೆಂಕಿ ಕೈಲಿ ಸರಸಾ. ಯಜಮಾನ್ರೇ ಇಷ್ಟು ವರ್ಷ ನಿಮ್ಮ ಸೇವೆ ಮಾಡಿದೀನಿ. ಒಂದು ಮಾತು ಬೇಡ್ಕೋತೀನಿ. ಲಾಲಿಸಬೇಕು.'

'ಏನು ಹೇಳು?'

'ಒಂದ್ಸಲ ಹೋಗಿ ಹಾಂಡ್ಬಂದ್ಬಿಡಿ. ಅವರ ಮನೆ ಹಾಳಾಗಲಿ'

'ಅದು ಸಾಧ್ಯವಿಲ್ಲದ ಮಾತು ದಾಸಪ್ಪ.'

'ಎಂಥ ವಿಶ್ವಾಮಿತ್ರ ವಸಿಷ್ಠರ ತಪಸ್ಸೇ ಕೆಟ್ಟು ಹೋಗುತ್ತಂತೆ, ನಿಮ್ಮದೇನು. ನನ್ನ ಮಾತು ಕೇಳಿ'

'ಅದಾಗದು. ನನ್ನ ನಾಲಿಗೆಯ ಭೀತಿಗೆ, ತಾಯಿಯನ್ನು ಸುಲ್ತಾನನ ಭೋಗದ ಹೆಣ್ಣಾಗಿ ಮಾಡಲೇ. ಅಂಥ ಮಗ ಇದ್ದರೆಷ್ಟು ಸತ್ತರೆಷ್ಟು. ತಾಯಿಯ ಮಾನ ಹೋದ ಮೇಲೆ ಉಳಿದದ್ದೇನು. ಈ ಘಟ ಉರುಳಿದರೂ ಸರಿಯೆ. ಅದು ಸಾಧ್ಯವಿಲ್ಲ'

'ದಾಸಪ್ಪ ಏನೇನೋ ಹೇಳಿದ. ಅತ್ತ, ಸಿಟ್ಟಾದ, ಬೈದ. ಏನೆಂದರೂ ವೆಂಕಟಸುಬ್ಬಯ್ಯನವರು ಕದಲಲಿಲ್ಲ. ಕಡೆಗೆ—

'ದಾಸಪ್ಪ, ಇವತ್ತು ಸಂಜೆಗೆ ಪೂಜೆಯಿದೆ. ಬಾ. ನಾನು ಸ್ನಾನ ಮಾಡಬೇಕು' ಎಂದು ಹೇಳಿ ಎದ್ದು ಹೋದರು. ಮನೆಯಲ್ಲಿ ಆಗ ಅನಂತಯ್ಯನ ಮಗ, ಸೊಸೆ ಇದ್ದರು. ಬೇರಾರೂ ಇರಲಿಲ್ಲ ಅವರಿಗೆ. ಅನಂತಯ್ಯನವರ ಮಗ ವೆಂಕಟೇಶನಿಗೆ 'ಊರೊಳಗೆ ಹೋಗಿ ಒಂಭತ್ತು ಗಂಟೆ ಹೊತ್ತಿಗೆ ಮಂಗಳಾರತಿಗೆ ಬರಬೇಕಂತೆ ಎಂದು ಹೇಳಿ ಬಾ' ಎಂದು, 'ಗಂಗಾ-ಪೂಜೆಗೆ ಸಿದ್ಧಮಾಡು.' ಎಂದು ಆತನ ಹೆಂಡತಿಗೆ ಹೇಳಿ, ಸ್ನಾನಕ್ಕೆ ಇಳಿದರು. ನೂರಾರು ಕೊಡ ನೀರು ಹೊಯಿದುಕೊಂಡರಂತೆ ಅವರು ಆ ದಿನ; ಸ್ನಾನಮಾಡಿದವರೇ ಬಂದು ಮಡಿಯಿಟ್ಟು ದೇವರ ಮನೆ ಸೇರಿ ಬಿಟ್ಟರು. ಅಮ್ಮನವರಿಗೆ ಕುಂಕುಮಾರ್ಚನೆ, ಸಹಸ್ರನಾಮ, ಅಷ್ಟೋತ್ತರ ಪೂಜೆ ಎಲ್ಲವನ್ನೂ ಕ್ರಮವಾಗಿ ಮಾಡಿ, ವೆಂಕಟೇಶನನ್ನು ಕರೆದು—'ನೀನೇ ಮಂಗಳಾರತಿ ಮಾಡಿ, ಹೋಗುವವರಿಗೆ ಪ್ರಸಾದ ಕೊಟ್ಟು ಕಳಿಸಿಬಿಡು. ನನಗಾಗಿ ಕಾಯುವುದು ಬೇಡ' ಎಂದು ಹೇಳಿ, ತಂಬೂರಿ ತೆಗೆದುಕೊಂಡು ಹಾಡಲಾರಂಭಿಸಿದರು. ನವಾಬರ ಸಿಟ್ಟಿನ ಸಮಾಚಾರ ತಿಳಿದ ನೂರಾರು ಜನ ಬಂದು, ಅವರನ್ನು ಕಂಡು, ನಮಸ್ಕಾರ ಮಾಡಿ, ಪ್ರಸಾದ ತೆಗೆದುಕೊಂಡು ಹೋದರು. ಯಾರಿಗೂ ಅವರನ್ನು ಮಾತನಾಡಿಸುವ ಧೈರ್ಯವಾಗಲಿಲ್ಲ. ಏಕೋ ಅವರ ಮುಖ ರುದ್ರವಾಗಿತ್ತು. ಹೊತ್ತಿನ ಅರಿವು ಮರೆತು ಹಾಡುತ್ತಿದ್ದರು ವೆಂಕಟಸುಬ್ಬಯ್ಯ.

X X X X X

'ಅತ್ತ—ವೆಂಕಟಸುಬ್ಬಯ್ಯನವರ ಮೇಲೆ ಅಬ್ಬರಿಸಿ ಹೋದ ನವಾಬರಿಗೂ ಮನಸ್ಸಿಗೆ ಸಮಾಧಾನವಿಲ್ಲ. ಹೃದಯಾಂತರಾಳದಲ್ಲಿ ಏನೋ ಅರ್ಥವಾಗದ ತಹತಹ. ಊಟವೂ ರುಚಿಯಾಗಲಿಲ್ಲ. ಮನಸ್ಸು ಸುಮ್ಮನೆ ಕಿಡಿಯಾಡುತ್ತಿತ್ತು. ಯಾರ ಕೈಯಲ್ಲೂ ಮಾತನಾಡುವುದೂ ಬೇಕಾಗಲಿಲ್ಲ. ನಿದ್ರೆಯ ನೆಪ ಮಾಡಿಕೊಂಡು, ಹಾಸಿಗೆಯಲ್ಲಿ ಮಲಗಿದರೂ, ಕಣ್ಣಿಗೆ ನಿದ್ದೆ ಹತ್ತಲಿಲ್ಲ. ಕಾವಳಿದ ಇರುಳಿನ ತಂಗಾಳಿಯೂ ಅವರ ಮೈಗೆ ತಂಪಾಗಲಿಲ್ಲ. ಹೃದಯದ ಉದ್ವೇಗದಿಂದ, ಕಣ್ಣು ಬೆಂಕಿ ಹೊತ್ತಿದಂತೆ ಉರಿಯುತ್ತಿತ್ತು.

'ಬೇಹುಗಾರನಿಂದ ಅವರಿಗೆ ವೆಂಕಟಸುಬ್ಬಯ್ಯನವರು ಕೊನೆಯ ಪೂಜೆ ಮಾಡುತ್ತಿರುವುದೂ, ಅವರ ಹಾಡು ಕೇಳಲು ನೂರಾರು ಜನ ನೆರೆದಿರುವುದೂ ತಿಳಿದಿತ್ತು. ತನ್ನ ಕಟ್ಟಾಜ್ಞೆಗೆ ಹೆದರಿ ಕಂಗಲಾಗುವರನ್ನು ಕಂಡಿದ್ದ—ಟೀಪು. ಹೀಗೆ ಅದನ್ನು ಅನುಭವಿಸಲು ಸಿದ್ಧವಾಗುವವರನ್ನು ಕಾಣ. ಅದೂ ಅವನ ಮನಸಿನಲ್ಲಿ, ಹೃದಯದಲ್ಲಿ ಗೊಂದಲವನ್ನುಂಟುಮಾಡಿತ್ತು. ಹೀಗೂ ಉಂಟೆ?

'ಟೀಪುವೂ ವೆಂಕಟಸುಬ್ಬಯ್ಯನವರ ಹಾಡುಗಾರಿಕೆಯ ಬಗ್ಗೆ ಸಾವಿರ ಕಥೆ ಕೇಳಿದ್ದ. ಅವರು ಹಾಡುವಾಗ ಶಿಲಾಮೂರ್ತಿ ಕಂಬನಿ ಗರೆಯುವುದು, ಜ್ವರ ಬಂದವರಿಗೆ ಜ್ವರ ಇಳಿಯುವುದು, ಮದಿಸಿದ ಅನೆ ಮೃದುವಾಗುವುದು, ದೇವಿ ಅವರ ಹಾಡು ಕೇಳುತ್ತಾ ಕೂತಿರುವುದು ಕಾಣುವುದು-ಹೀಗೇ: ನೂರು ಕಥೆ. ಆ ಕಥೆಗಳನ್ನು ಅವನು ನಂಬದೆ ಹೋದರೂ, ಆತನಿಗೂ ಅವರು ಹೇಗೆ ಹಾಡುತ್ತಾರೋ ಕೇಳಬೇಕು ಎನಿಸಿತ್ತು. ಹೆಂಡತಿಗೂ ಅವರ ಕೈಲಿ ಜನಾನಾದಲ್ಲಿ ಹಾಡಿಸುವುದಾಗಿ ಮಾತು ಕೊಟ್ಟಿದ್ದ. ಆದರೆ ಈಗ—

'ಯಾರ ಬಯಕೆಯೂ ನೆರವೇರುವಂತಿಲ್ಲ. ತಾನಿಲ್ಲಿ ಅಸ್ಪಷ್ಟ ತೀವ್ರ ಯಾತನೆಯ ಶರಶಯ್ಯೆಯಲ್ಲಿ ಹೊರಳುತ್ತಿರುವಾಗ, ಅಲ್ಲಿ ವೆಂಕಟಸುಬ್ಬಯ್ಯ ಕಡೆಯ

ಬಾರಿಗೆಂದು ಹಾಡುತ್ತಿದಾರೆ. ಈ ದಿನ ಮುಗಿದರೆ, ಮತ್ತಾರಿಗೂ ಅದನ್ನು ಕೇಳುವ ಯೋಗವಿಲ್ಲ.

'ನಿಜವಾಗಿಯೂ ಅಷ್ಟು ಅದ್ವಿತೀಯವಾದುದೇ ಅವರ ಸಂಗೀತ ಕೌಶಲ. ಜನರ ಮಾತನ್ನು ನಂಬಬಹುದೇ? ಜನರ ಮಾತಿನಂತೆ ಇದು ಅತಿಶಯೋಕ್ತಿಯ ಮೂಟೆಯಾಗಿದ್ದರೆ….? ಒಂದು ವೇಳೆ ಆದು ನಿಜವೇ ಆಗಿದ್ದರೆ….? ಆದರೆ ಏನಾದರೂ ಈ ರಾತ್ರಿ ಕಳೆದು ಹೋದರೆ ಮತ್ತೆ ಆ ಮಾತು ಪರೀಕ್ಷಿಸಲು ಅವಕಾಶವೆಲ್ಲಿ?

'ಆ ಭಾವನೆ ಬಂದ ಕೂಡಲೇ ಟೀಪುವಿನ ಹೃದಯದಲ್ಲಿ ಹೊಗೆಯಾಡುತ್ತಿದ್ದ ಕ್ರೋಧದ ಅಡಿಯಲ್ಲಿ ಹುದುಗಿದ ಬಯಕೆ ತಟಕ್ಕನೆ ತಲೆದೋರಿತು. ನೂರಾರು ಜನ ಅವರ ಹಾಡನ್ನು ಕೇಳುತ್ತಿದ್ದಾರೆ. ತಾನೂ ಅದನ್ನು ಕೇಳಬಾರದೇಕೆ? ಆಗ ಜನರ ಮಾತು ಎಷ್ಟು ನಿಜವೋ, ಎಷ್ಟು ಸುಳ್ಳೋ ತಾನೇ ಗೊತ್ತಾಗುತ್ತದೆ... ಒಂದು ವೇಳೆ ಜನರ ಮಾತು ನಿಜವಾಗಿದ್ದರೆ?... ಮುಂದೆ?...ಆ ಭಾವನೆಯನ್ನು ಬಂದ ಹಾಗೇ ತುಳಿದು ಬಿಟ್ಟ. ಆದರೆ ಕೇಳುವ ಕುತೂಹಲ ಅಡಗಲಿಲ್ಲ.

'ಆ ವೇಳೆಗೆ ಕಹಳೆ ಬತೇರಿಯಿಂದ ನಡುರಾತ್ರಿಯ ಕಹಳೆ ಕೇಳಿ ಬಂತು. ಹೊತ್ತಾದರೆ ಸಂಗೀತ ಮುಗಿದು ಹೋಗಬಹುದೆಂದು, ಕೂಡಲೇ ಎದ್ದು ಸೈನಿಕರ ನಿಲುವಂಗಿಯಲ್ಲಿ ರಾಜಪೋಷಾಕನ್ನು ಮರೆಸಿ, ಅಂಗರಕ್ಷಕನೊಬ್ಬನನ್ನು ಜೊತೆಗಿಟ್ಟುಕೊಂಡು ವೇಗವಾಗಿ ನಗರದೊಳಗೆ ನಡೆದ.

'ಅವರಿಬ್ಬರೂ ವೆಂಕಟಸುಬ್ಬಯ್ಯವವರ ಮನೆಗೆ ಬರುವ ವೇಳೆಗೆ ನಿರ್ಜನ ನಗರ ನಿಶ್ಶಬ್ದವಾಗಿ, ತಂಗಾಳಿಯ ಅಲೆಗಳಮೇಲೆ ತೇಲುತ್ತಿರುವ ಅವರ ಹಾಡಿನ ಮಧುರ ಗಂಭೀರ ಧ್ವನಿ ಕೇಳಿಸಿತು. ಬೆಂಗಾವಲವನಿಗೆ ಸದ್ದು ಮಾಡದಂತೆ ಹೇಳಿ, ಟೀಪು ಕತ್ತಲು ಕವಿದ ಜಗಲಿಯ ಮೇಲೆ, ಹತ್ತಿ ಸಂಗೀತವನ್ನು ಕೇಳುತ್ತಾ ನಿಂತ.

’ಪೂಜೆಗೆ ಬಂದ ಜನರೆಲ್ಲರೂ ಹೊರಟು ಹೋದುದರಿಂದ ಮನೆಯೊಳಗೂ ಏನೂ ಗದ್ದಲವಿರಲಿಲ್ಲ. ತಂಬೂರಿಯ ಝೇಂಕಾರದೊಂದಿಗೆ ಮೇಳವಿಸಿದ ವೆಂಕಟಸುಬ್ಬಯ್ಯನವರ ಕಂಠನಾದ ದೇವನದಿಯಂತೆ ತೆರೆತೂಗಿ ಲಾಸ್ಯವಾಡುತ್ತಿತ್ತು. ಒಂದು ಗಳಿಗೆ ಹಾಗೇ ಕಿವಿಗೊಟ್ಟು ಕೇಳಿದ ಟೀಪು... ಏನೋ ಮೋಡಿ ಮಾಡಿದಂತಾಯಿತು. ಹಿಂದೆಂದೂ ಅವನು ಕೇಳಿ ಅನುಭವಿಸದ, ಅಪೂರ್ವ ರಸ ಮಾಧುರ್ಯ, ಧ್ವನಿ ಗರ್ಭದಿಂದ ಮಿಂಚಿನಂತೆ ಮೂಡಿ, ಚೆಲ್ಲಾಡುತ್ತಾ ಅವನ ಹೃದಯವನ್ನು ಸೆರೆ ಹಿಡಿದಿತು.

’ಮುಂಗಾರಿನ ಮೇಘದಂತೆ. ಗಂಭೀರವಾಗಿ ಘೋಷಿಸಿ, ಪ್ರವಾಹದಂತೆ ಭೋರ್ಗರೆದು ಜಲಪಾತದಂತೆ ಭೋರೆಂದು ಧುಮುಕಿ, ಮುಗಿಲಾಳದಲ್ಲಿ ರೆಕ್ಕೆ ಚಲಿಸದೆ ಹಾರುವ ಹದ್ದಿನಂತೆ ತೇಲುತ್ತಾ ಹಾಡು ಹರಿಯುತ್ತಿತ್ತು. ತನ್ನ ಕರೆಗೆ ದೇವ ಓ ಗೊಡಲಿಲ್ಲವೆಂಬ ಭಕ್ತನ ಹೃದಯ ವೇದನೆ ಹಾಡಾಗಿ ಹೊಮ್ಮುತ್ತಿತ್ತು. ಭಕ್ತನ ವಿರಹ ವೇದನೆ, ನಿರಾಶೆ, ಎದೆಯಾಳದ ಪ್ರೇಮದಲ್ಲಿ ತೊಯ್ದು ಸ್ನಿಗ್ಧವಾದ ಕ್ರೋಧ, ಮತ್ತೆ ಮತ್ತೆ ಮಿಡುಕುವ, ಕುದಿಯುವ ಕಂಬನಿಯಾಗಿ ತುಳುಕುವ ನೋವು, ವಜ್ರಸ್ತಂಭದಂತೆ ನಿಂತ ಭರವಸೆ, ಗಾಳಿಗೆ ಸಿಕ್ಕ ದೀಪದ ಕುಡಿಯಂತೆ ಹೊಯ್ದಾಡುವ ಆಸೆಯ ಚಂಚಲತೆ, ಆತುರ, ಕಾತುರ, ಬಯಕೆ, ಬೇಸರ—ದೇವದರ್ಶನಾತುರನಾದ ಭಕ್ತನ ಹೃದಯದಲ್ಲಿ ಮೂಡಿ ದಾಂಗುಡಿಯಿಡುವ ಅನಂತ ಭಾವನೆಗಳು ಹಾಡಿನಲ್ಲಿ ರೂಪತಾಳಿ, ಮಸುಕಾದ ಗಾಳಿ ಚಿತ್ರದಂತೆ ಕಣ್ಣಮುಂದೆ ಸಂಚರಿಸಿ ಹೋದವು. ಆ ಹಾಡನ್ನು ಕೇಳುವಾಗ ಟೀಪುವಿನ ಕಣ್ಣಮುಂದೆ, ಅದನ್ನು ಕೇಳ ಕೇಳುತ್ತಾ, ಬೇಡವೆಂದರೂ ಟೀಪುನ ಕಣ್ಣೊ ಒದ್ದೆಯಾಯಿತು. ಅವನ ಕ್ರೋಧ, ಸೇಡು, ಕಠೋರತೆ ಎಲ್ಲವೂ ಮಾಂತ್ರಿಕ ಸ್ಪರ್ಶಕ್ಕೆ ಸಿಲುಕಿದಂತೆ ಮಾಯವಾಗಿ, ಕೋಮಲತೆ ಮೂಡಿತು. ಭಾವಲೋಕದ ಗಂಧರ್ವವಾಯಿತು ಅವನ ಮನಸು. ಕಮಲದ ಕೊಳದ ಮೇಲೆ ಹರಿದು ಬಂದ ಸುವಾಸಿತ ತಂಗಾಳಿ ಸೋಕಿದಂತೆ ಅವನ ಮೈ ತಂಪಾಯಿತು. ಮಗುವಿನ ನಗುವಿನಂತೆ ಹೊಳೆವ ಬೆಳಕು ಸುತ್ತಲೂ ಹರಡಿದಂತೆ ತೋರಿತು. ಬೆಳದಿಂಗಳ ಬೆಳಕಿಗೆ ಕರಗುವ

ಅಮೃತಶಿಲೆಯಾಯಿತು ಟೀಪುವಿನ ಹೃದಯ. ಒಳಗೆ ಹೋಗಿ ಹಾಡುತ್ತಿರುವವರ ಕಾಲು ಹಿಡಿದು, ತಪ್ಪಾಯಿತೆಂದು ಬೇಡಬೇಕೆನಿಸಿತು. ಆದರೆ ನಡುವೆ ಹೋಗಲು ಮನಸಾಗದೆ ಕೇಳುತ್ತಾ, ಮೈಮರೆತು ನಿಂತಿದ್ದ. ಬೆಳಗಿನ ಜಾವದ ಕೋಳಿ ಕೂಗಿದುದೂ ಅವನಿಗೆ ಕೇಳಿಸಲಿಲ್ಲ. ನಿಂತೇ ಇದ್ದ. ಹಾಗೇ ಕನಸಿನಂತೆ ಕರಗಿ ಹೋಯಿತು ಹಾಡು. ಅದರದೂ ಎಚ್ಚರವಿರಲಿಲ್ಲ ಆತನಿಗೆ...ಹಾಗೇ ನಿಂತಿದಾನೆ.

’ಇದ್ದಕ್ಕಿದಂತೆಯೇ ಮನೆಯೊಳಗಿನಿಂದ ಹೆಣ್ಣೊಬ್ಬಳು ಚಿಟಾರನೆ ಚೀರಿದ ಸದ್ದು ಕೇಳಿ, ಟೀಪು ತತ್ತರಿಸಿಹೋದ. ಏನು ಮಾಡುತ್ತಿರುವೆನೆಂದು ತಿಳಿಯದೆಯೇ ಮುಂದೆ ಹಾಕಿದ ಬಾಗಿಲನ್ನು ಕಾಲಲ್ಲಿ ಒದ್ದು ಮುರಿದು ಒಳಗೆ ಒಡಿದ. ಮನೆಯನ್ನು ಪ್ರವೇಶಿಸಿ, ಬೆಳಕು ಬರುತ್ತಿದ್ದ ಬಾಗಿಲ ಕಡೆ ಓಡಿ ಬಾಗಿಲಲ್ಲಿ ನಿಂತು ನೋಡಿದ.

’ಅದು ದೇವರ ಮನೆ. ಹೂವಿನ ಪರಿಮಳ, ಗಂಧಧ ಕಡ್ಡಿಯ ಮಧುರ ಧೂಮ ಕವಿದಿದೆ. ಹಗಲು ಬೆಳಕಾಗುವಷ್ಟು ಬೆಳಕು ಬಿದ್ದಿದೆ, ಹೊತ್ತಿಸಿದ ನೂರಾರು ದೀವಿಗೆಗಳಿಂದ. ಕರಿಯಮರದ ಮಂಟಪದಲ್ಲಿ, ಆಳೆತ್ತರದ ನಂದಾದೀವಿಗೆಗಳ ನಡುವೆ, ದೊಡ್ಡದಾದ ದೇವಿಯ ಸ್ವರ್ಣಮೂರ್ತಿ ಬೆಳಕಿನುಂಡೆಯಂತೆ ಹೊಳೆಯುತ್ತಿದೆ. ಅದರ ಇದಿರು ವೆಂಕಟಸುಬ್ಬಯ್ಯ ಪ್ರಜ್ಞೆತಪ್ಪಿ ಮಲಗಿದಾರೆ. ಅವರ ಬಾಯಿಂದ ರಕ್ತ ಚಿಲುಮೆಯಾಗಿ ಚಿಮ್ಮುತ್ತಿದೆ. ಅವರಿಗೆ ಅಷ್ಟು ದೂರದಲ್ಲಿ ಒಂದು ಕಡೆ ಗಂಗಾ ಮೂರ್ಛೆ ಬಿದ್ದಿದ್ದಾಳೆ. ಇನ್ನೊಂದು ಕಡೆ ತಂಬೂರಿ ಹಿಡಿದ ವೆಂಕಟೇಶ ಗರ ಹೊಡೆದವನಂತೆ, ಬಿಟ್ಟ ಕಣ್ಣು ಕದಲಿಸದೆ ಕೂತಿದಾನೆ. ರಕ್ತಸಿಕ್ತವಾದ ಕಠಾರಿ ಇನ್ನೂ ಹಾಗೇ ಇದೆ ವೆಂಕಟಸುಬ್ಬಯ್ಯನವರ ಕೈಯಲ್ಲಿ. ದೇವಿಯ ಇದುರಿನ ದೊಡ್ಡ ಬಂಗಾರದ ಥಳಥಳಿಸುವ ತಟ್ಟೆಯಲ್ಲಿ, ರಕ್ತದ ಮುದ್ದೆಯಂತೆ ಬಿದ್ದಿದೆ ಕತ್ತರಿಸಿದ ನಾಲಿಗೆ.

’ಆ ದೃಶ್ಯವನ್ನು ನೋಡಿ, ನೂರಾರು ಯುದ್ಧ ರಕ್ತಪಾತವನ್ನು ನೋಡಿದ ಟೀಪುವೂ ಗದಗದ ಹೆದರಿ ನಡುಗಿದ. ಒಂದು ಗಳಿಗೆ ಏನು ಮಾಡಬೇಕೆಂದು ಆತನಿಗೂ ತೋಚಲಿಲ್ಲ. ಆ ಮೇಲೆ ಮೈ ಕೊಡವಿಕೊಂಡು, ಹಿಂದೆ ಬಂದ ಬೆಂಗಾವಲ

ಭಟನನ್ನು ವೈದ್ಯರನ್ನು, ತನ್ನ ಖಾಸಾ ಹಕೀಮರನ್ನು ಕರೆತರುವಂತೆ ಓಡಿಸಿ, ಸದ್ದಡಗಿದ ಮನೆಯಲ್ಲಿ ಎಳೆಯ ಮಗುವಿನಂತೆ. ಬಿಕ್ಕಿ ಬಿಕ್ಕಿ ಅಳುತ್ತಾ ಕೂತ.

'ಆಗ ಹಗಲು ಹರಿವ ಹೊತ್ತು. ಒಂದು ಗಳಿಗೆಯಲ್ಲಿ ಸುದ್ದಿ ಊರಲ್ಲೆಲ್ಲಾ ಹರಡಿ ಆ ಕೌತಕವನ್ನು ನೋಡಲು ಸಾವಿರಾರು ಜನ ಸೇರಿದರು. ವೈದ್ಯರು ಬಂದು, ರಕ್ತ ಹರಿವ ವೆಂಕಟಸುಬ್ಬಯ್ಯನವರ ಬಾಯಿಗೆ ಪೂಜೆಯ ಕುಂಕುಮ ಒತ್ತಿ, ರಕ್ತ ನಿಲ್ಲಿಸಿ ದೇವರ ಮನೆಯಂದ ಹೊರಗೆ ತಂದರು. ಶೈತ್ಯೋಪಚಾರ ನಡೆದ ಎಷ್ಟೋ ಹೊತ್ತಿನ ಮೇಲೆ ಅವರಿಗೆ ಎಚ್ಚರ ಬಂದು ಕಣ್ಣು ಬಿಟ್ಟರು. ಕೂಡಲೇ ಟೀಪು ತಾನು ನವಾಬನೆಂಬುದನ್ನು ಮರೆತು ಅವರ ಕಾಲಮೇಲೆ ಬಿಇದ್ದು, ತಂದೆಯನ್ನು ಕಳೆದುಕೊಂಡ ಮಗುವಿನಂತೆ ರೋಧಿಸಿದ. ಮಾತಾಡಲಾಗದ ವೆಂಕಟಸುಬ್ಬಯ್ಯ, ಅವನ ತಲೆಯನ್ನು ನೇವರಿಸಿ, ತಮ್ಮ ಪ್ರೀತಿಯನ್ನು ಸೂಚಿಸಿದರು.

'ಹೀಗೇಕೆ ಮಾಡಿದಿರಿ? ಈ ಪಾಪಿಯ ಮನಸ್ಸು ಬದಲಾಯಿಸಲು ಅವಕಾಶ ಕೊಡಬಾರದಾಗಿತ್ತೇ ದಾದಾ?' ಎಂದು ಅಳುತ್ತಾ ಕೇಳಿದ ಟೀಪು. ವೆಂಕಟಸುಬ್ಬಯ್ಯ ಹಲಗೆ, ಬಳಪ ತರಿಸಿಕೊಂಡು ಬರೆದರು.

'ದುಃಖಿಸಬೇಡ. ದೇವಿಯ ಇಚ್ಛೆ ನೆರವೇರಿತು.'

'ಹಗಲಾಗುವವರೆಗೂ ಕಾಯಲಿಲ್ಲವೇಕೆ?'

'ನನ್ನದೇ ನನಗೆ ಹೆದರಿಕೆಯಾಯಿತು. ಅದಕ್ಕಾಗಿ.'

'ಏಕೆ?'

'ಹಗಲಾದರೆ ನೀನು ಮನಸ್ಸು ಬದಲಾಯಿಸಬಹುದು, ಬಿಡಬಹುದು. ನಿನ್ನ ಭಯವಿಲ್ಲ ನನಗೆ. ಆದರೆ ನಾನೇ ಜೀವ ಭಯದಿಂದ ಸೋತು ತಾಯಿಗೆ ಅಪಮಾನವಾದರೆ. ಅದಕ್ಕೇ ನನ್ನ ಮನಸ್ಸು ಕದಲಲು ಅವಕಾಶ ಕೊಡಲಿಲ್ಲ.'

'ಅವರು ಬರೆದುದನ್ನು ಓದಿ ಟೀಪು ಮೂಕನಾದ.

'ಆ ಬಳಿಕ ಟೀಪು, ವೆಂಕಟಸುಬ್ಬಯ್ಯನವರ ಅಪೇಕ್ಷೆಯಂತೆ ಅವರನ್ನು ಅವರ ತಾಯಿಯ ಊರಾದ ತೊರೆಯೂರಿಗೆ, ಸಕಲ ಮಾನ ಮರ್ಯಾದೆಯೊಡನೆ ಕಳಿಸಿಕೊಟ್ಟ. ಅವರಿಗೆಂದು ಬೇಕಾದಷ್ಟು ಜಮೀನು, ಮಾನ್ಯ ಕೊಟ್ಟ. ದುರ್ಗದಿಂದ ಬಂದ ವೆಂಕಟಸುಬ್ಬಯ್ಯನವರು ತೊರೆಯೂರಿನಲ್ಲಿದ್ದ ಅನಂತಯ್ಯನ ಮನೆಯಲ್ಲಿ ನೆಲೆಸಿದರು. ಅಮ್ಮನವರ ದೇವಾಲಯ ಕಟ್ಟಿಸಿ, ಅಲ್ಲಿಯ ಪೂಜೆ ಅಖಂಡವಾಗಿ ನಡೆಯಲೆಂದು ಆಸ್ತಿ ಬಿಟ್ಟರು. ಗುಡಿಯಲ್ಲೇ ಮೂರುಹೊತ್ತೂ ಇರುತ್ತಿದ್ದರು.

'ಕಡೆಗೊಂದು ದಿನ ಹಗಲು ಹರಿಯುತ್ತಿರುವಾಗ, ಅಮ್ಮನವರ ಗುಡಿಯಲ್ಲೇ ಅವರ ಪ್ರಾಣಪಕ್ಷಿ ಹಾರಿಹೋಯಿತು. ಆಗ, ಅವರ ಬಳಿಯಲ್ಲಿದ್ದವರು ನೋಡಿದರಂತೆ—ಅವರ ಮೈಯೊಳಗಿಂದ ದು ಬೆಳಕು ಹುಟ್ಟಿ ಹಾಗೇ ಹಾರಿ ಅಮ್ಮನವರ ಎದೆಯ ವಜ್ರದ ಪದಕದಲ್ಲಿ ಸೇರಿ ಹೋಯಿತಂತೆ.'

೧೮

ಗೋವಿಂದಯ್ಯ ಹೇಳುತ್ತಿದ್ದ ಕಥೆ ನಿಟ್ಟುಸಿರಿನೊಂದಿಗೆ ಮುಕ್ತಾಯವಾಯಿತು. ಸ್ವಲ್ಪ ಹೊತ್ತು ಮೌನವಾಗಿ ಕುಳಿತಿದ್ದು ಹೇಳಿದೆ—'ಕಡೆಗಾಲದಲ್ಲಿ ಅವರು ಹಾಡುವುದು ತಪ್ಪಿದ್ದು ಅನ್ಯಾಯ.'